# ಅದ್ಭುತ ಪ್ರೇಮ.

## (ಐತಿಹಾಸಿಕ ಕಾದಂಬರಿ.)

ಲೇಖಕ:

ಗದಿಗೆಯ್ಯಾ ಹುಚ್ಚಯ್ಯಾ ಹೊಸ್ನಾಪುರಮಠ, ವಕೀಲ,

ಧಾರವಾಡ

ತಿದ್ದಿದ ೨ನೇ ಆವೃತ್ತಿ

ಸನ್ನ ೧೯೨೮ ಇಸವಿ.

 [ಕ್ರಯ ೧೨ ಆಣೆಃ.

# ಪ್ರಸ್ತಾವನೆ.

ಅಕಬರ ಬಾದಶಹನು ಹಿಂದೂ ಮುಸಲ್ಮಾನರಲ್ಲಿ ಬಂಧುಭಾವವನ್ನು ಬೆಳೆಸುವ ಉದ್ದೇಶದಿಂದ ಹಿಂದೂ ಜನರ ಆಚಾರವಿಚಾರಗಳನ್ನೂ ಧರ್ಮ ಪದ್ಧತಿಗಳನ್ನೂ ಕ್ರಿಯಾಕರ್ಮಗಳನ್ನೂ ಕಲಿತುಕೊಂಡು ಬರುವದಕ್ಕಾಗಿ ಅನೇಕ ಉಚ್ಚವಂಶೀಯರಾದ ಮತ್ತು ತನ್ನ ವಿಶ್ವಾಸಿಕರಾದ ಮುಸಲ್ಮಾನ ರನ್ನು ಹಿಂದೂ ವೇಷದಿಂದ ಹಿಂದೂ ಜನರೊಳಗೆ ಇರಲಿಕ್ಕೆ ಕಳಿಸಿದ್ದನು. ಅವರಲ್ಲಿ ಫೈಜಿಯು ಒಬ್ಬನಿದ್ದನು. ಬಾದಶಹನು ಫೈಜಿಗೆ ಸಂಸ್ಕೃತ ಅಧ್ಯಯನ ಮಾಡಿಕೊಂಡು ಬರುವ ಕೆಲಸವನ್ನು ಒಪ್ಪಿಸಿದ್ದರಿಂದ ಅವನು ಒಬ್ಬ ವಿದ್ವಾನ ತಪಸ್ವಿಯ ಕಡೆಗೆ ಹೋಗಿ ಮಹೇಶನೆಂಬ ಹೆಸರಿನಿಂದ ಅವನ ಶಿಷ್ಯನಾಗಿ ನಿಂತನು. ಮಹೇಶನು ಈ ಪ್ರಕಾರ ಆ ತಪಸ್ವಿಯ ಹತ್ತರ ಅಧ್ಯಯನಕ್ಕೆ ಹೋಗಿ ನಿಂತಿರಲು ಆ ತಪಸ್ವಿಯು ಪಾಲನ ಮಾಡಿದ ಸುಶೀಲೆ ಎಂಬ ಮುನಿಕುಮಾರಿಯ ಪ್ರೇಮವು ಮಹೇಶನಗೂಡ ವೃದ್ಧಿಂ ಗತವಾಯಿತು. ಮುಂದೆ ಈ ಪ್ರೇಮದ ಪರಿಣಾಮವು ಅನೀತಿಕಾರಕ ವಾಗಬಹುದೆಂಬ ಭಯದಿಂದ ಮಹೇಶನು ಸುಶೀಲೆಯನ್ನು ತಪ್ಪಿಸಿ ತಪಸ್ವಿಯ ಕಡೆಗೆ ಬಂದು ತನ್ನ ಗೌಪ್ಯ ಸ್ಫೋಟನ ಮಾಡಿ ಆತನ ಅಪ್ಪಣೆಯಿಂದ ತಪಸ್ವಿಯ ಆಶ್ರಮವನ್ನು ಬಿಟ್ಟು ಹೋದನು. ಹಾಗೂ ತನ್ನ ವೃತ್ತಾಂತ ವನ್ನು ಒಂದು ಪತ್ರದಲ್ಲಿ ಬರೆದು ಸುಶೀಲೆಗೆ ಅದು ಮುಟ್ಟುವಂತೆ ವ್ಯವಸ್ಥೆ ಮಾಡಿದನು. ಶಕ್ತಿಗಡದ ಮಹಾರಾಣಾ ಪ್ರತಾಪಸಿಂಹನು ರಜಪುತಸ್ಥಾನ ದಲ್ಲಿ ತನ್ನ ಪೂರ್ಣ ಅಧಿಕಾರವನ್ನು ಪ್ರಸ್ಥಾಪಿಸಲಿಕ್ಕೂ ಅಕಬರ ಬಾದಶಹನ ವರ್ಚಸ್ವವನ್ನು ಕಡಿಮೆ ಮಾಡಲಿಕ್ಕೂ ತೊಡಗಿದ್ದನು. ಇದರಿಂದ ಅಕಬರ ಬಾದಶಹನು ಸಿಟ್ಟಿಗೆದ್ದು ಶಕ್ತಿಗಡದ ಮೇಲೆ ಮುತ್ತಿಗೆಯನ್ನು ಹಾಕಬೇ ಕೆಂದು ನಿಶ್ಚಯಮಾಡಿ ತನ್ನ ನಿಶ್ಚಯವನ್ನು ತನ್ನ ದರಬಾರದಲ್ಲಿಯ ಸರ ದಾರರಿಗೆ ತಿಳಿಸಲಾಗಿ ಅಂಬರದ ರಾಣನಾದ ಮಾನಸಿಂಹನು ಶಕ್ತಿಗಡದ ಮೇಲೆ ಮುತ್ತಿಗೆಯನ್ನು ಹಾಕಿ ಮಹಾರಾಣಾ ಪ್ರತಾಪಸಿಂಹನನ್ನು ಸೋಲಿಸಿ

ಅವನನ್ನು ಸೆರೆ ಹಿಡಿದು ದಿಲ್ಲಿಗೆ ಕಳಿಸಿದನು. ಆ ಕಾಲಕ್ಕೆ ಸೆರೆ ಹಿಡಿದು ತಂದ ಸ್ತ್ರೀಯರೊಳಗೆ ಸುಶೀಲೆಯು ಇದ್ದಳು. ಯುದ್ಧವು ಮುಗಿದ ತರುವಾಯ ಅಂತಃಪುರದ ಯಾವತ್ತು ಸ್ತ್ರೀಯರಿಗೆ ಬಿಡುಗಡೆಯಾದಾಗ್ಯೂ ಸುಶೀಲೆಗೆ ಮಾತ್ರ ಬಿಡುಗಡೆಯಾಗಲಿಲ್ಲ. ಆಕೆಯನ್ನು ಮಾನಸಿಂಹನು ಮದುವೆಯಾದನು. ಈ ಪ್ರಕಾರ ಸುಶೀಲೆಯು ಮಾನಸಿಂಹನ ರಾಣಿಯಾಗಿ ಸುಖದಿಂದಿರಲು ಫೈಜಿಯು ಅಂಬರದಲ್ಲಿ ಊರಹೊರಗಿನ ದೇವಾಲಯದಲ್ಲಿ ಬಂದು ಕುಳಿತು ಸುಶೀಲೆಯ ಬೆಟ್ಟಿಯ ಬಗ್ಗೆ ಉತ್ಕಂಠಿತನಾಗಿ ಆಕೆಗ ನಿರೂಪವನ್ನು ಕಳಿಸಿದನು. ಆ ಬಳಿಕ ಸುಶೀಲೆಯು ತನ್ನ ಪತಿಯಾದ ಮಾನಸಿಂಹನು ಯುದ್ಧಕ್ಕೆ ಹೋಗುವದಕ್ಕಾಗಿ ರಾಜಧಾನಿಯನ್ನು ಬಿಟ್ಟುಹೋದ ಸಂಧಿಯನ್ನು ಸಾಧಿಸಿ ರಾತ್ರಿಯೊಳಗೆ ದಾಸಿಯನ್ನು ತನ್ನ ಸಂಗಡ ಕರೆದುಕೊಂಡು ಫೈಜಿಯ ಬೆಟ್ಟಿಗೆ ದೇವಾಲಯಕ್ಕೆ ಹೋದಳು. ಅಲ್ಲಿ ಸುಶೀಲೆಯ ಮತ್ತು ಫೈಜಿಯ ನಡುವೆ ಭಾಷಣವು ನಡೆದಿರುವಷ್ಟರಲ್ಲಿ ಮಾನಸಿಂಹನು ಅಲ್ಲಿಗೆ ಹೋಗಿ ಅವರ ಭಾಷಣವು ನಡೆದ ಸಂಗತಿಯನ್ನು ಕಣ್ಣಾರೆ ಕಂಡು ಸುಶೀಲೆಯನ್ನು ಅಂತಃಪುರದ ಹೊರಗೆ ಹಾಕಿ ಆಕೆಯನ್ನು ಅವಮಾನಪಡಿಸಿದನು. ಬಳಿಕ ಆಕೆಯು ತನ್ನ ಪಿತನ ಆಶ್ರಮಕ್ಕೆ ಪ್ರಯಾಸದಿಂದ ತಿರುಗಿ ಹೋಗಿ ಯಾವತ್ತು ಸಂಗತಿಗಳನ್ನು ಅವನಿಗೆ ತಿಳಿಸಿ ಅಲ್ಲಿ ದುಃಖದಿಂದ ಕಾಲ ಕಳೆಯಹತ್ತಿದಳು. ದಿನೇ ದಿನೇ ಹೃದ್ರೋಗದಿಂದ ಬೆಂದು ಬೆಂಡಾಗಿ ಹೋದಳು. ಖುಗ್ಣಶಯ್ಯಾವಶಳಾಗಿದ್ದ ಸುಶೀಲೆಯ ವೃತ್ತಾಂತವನ್ನೂ ಮುನಿಯ ಆಶ್ರಮದಲ್ಲಿ ಫೈಜಿಯು ಮತ್ತು ಸುಶೀಲೆಯು ಬಂಧುಭಗಿನಿಯರಾಗಿ ಇದ್ದರೆಂಬ ಸಂಗತಿಯನ್ನೂ ಮಾನಸಿಂಹನು ಫೈಜಿಯ ಬಾಯಿಂದ ಕೇಳಿ ಪಶ್ಚಾತ್ತಾಪ ಹೊಂದಿ ಫೈಜಿಯನ್ನು ಕರೆದುಕೊಂಡು ಸುಶೀಲೆಯು ಮಲಗಿಕೊಂಡಿದ್ದ ಗುಹೆಯಲ್ಲಿ ಹೋದನು. ಅಲ್ಲಿ ಅವಳ ಅಂತ್ಯದರ್ಶನವಾಯಿತು. ತಪಸ್ವಿಯು ಮಾನಸಿಂಹನನ್ನು ನೋಡಿ ಮೊದಲಿಗೆ ಸಿಟ್ಟಾದರೂ ಮಾನಸಿಂಹನು ಸುಶೀಲೆಯನ್ನು ತಿರುಗಿ ಕರೆದುಕೊಂಡು ಹೋಗಿ ಪಟ್ಟರಾಣಿಯನ್ನು ಮಾಡಲಿಕ್ಕೆ ಒಡಂಬಟ್ಟದ್ದರಿಂದ ಅವನು ಹಿಂದಗಡೆ ಸಮಾಧಾನಪಟ್ಟನು. ತಪಸ್ವಿಯು ಅಂಬರಕ್ಕೆ ಸುಶೀಲೆ

ಯನ್ನು ಕರೆದುಕೊಂಡು ಹೋಗಲು ಪಲ್ಲಕ್ಕಿಯನ್ನೂ ಆನೆಗಳನ್ನೂ ಸೈನ್ಯವನ್ನೂ ತೆಗೆದುಕೊಂಡು ಬಾ ಎಂತಲೂ ಅವನು ತಿರುಗಿ ಬರುವದರೊಳಗಾಗಿ ತಾನು ಸುಶೀಲೆಯನ್ನು ಗುಣಮಾಡುತ್ತೇನೆಂತಲೂ ಹೇಳಿ ಮಾನಸಿಂಹನನ್ನು ಕಳಿಸಿ ಕೊಟ್ಟನು ಇತ್ತ ಸುಶೀಲೆಯ ರೋಗವು ಅಧಿಕವಾಗಲು ಅವಳು ತನ್ನ ಪತಿಯು ತಿರುಗಿ ಬರುವ ದಾರಿಯನ್ನು ನೋಡುತ್ತ ಕಂಠದಲ್ಲಿ ಪ್ರಾಣವನ್ನು ಹಿಡಿದು ಕೊಂಡು ತಪಸ್ವಿಯ ತೊಡೆಯ ಮೇಲೆ ಬಿದ್ದುಕೊಂಡಳು. ಇಷ್ಟರಲ್ಲಿ ಮಾನ ಸಿಂಹನು ತಿರುಗಿ ಬರಲು ಸುಶೀಲೆಯು ಅವನ ಬಾಯಿಂದ ಪಲ್ಲಕ್ಕಿ, ಆನೆ ಮತ್ತು ಸೈನ್ಯವು ಬಂದದ್ದನ್ನು ಕೇಳಿ ಹಾಗೂ ಅವನ ಮೋರೆಯನ್ನು ನೋಡಿ ಆನಂದಪಟ್ಟು "ನನಗೆ ಆಶೀರ್ವಾದ ಮಾಡಿರಿ" ಎಂದು ಹೇಳಿ ಪ್ರಾಣಬಿಟ್ಟಳು. ಆ ಮೇಲೆ ಮಾನಸಿಂಹನು ಸುಶೀಲೆಯ ಮೃತದೇಹವನ್ನು ಮೆರವಣಿಗೆ ಯಿಂದ ರಾಜಧಾನಿಗೆ ಒಯ್ದು ಅವಳ ಚಿತಾಭಸ್ಮನನ್ನು ಒಂದು ಬಂಗಾರದ ಪಾತ್ರೆಯಲ್ಲಿ ಹೂಳಿ ಅದರ ಮೇಲೆ ಸುಶೀಲೆಯ ಸುವರ್ಣ ಪ್ರತಿಮೆಯನ್ನು ಸ್ಥಾಪನ ಮಾಡಿದನು. ಈ ಪ್ರಕಾರ ಈ ಕಾದಂಬರಿಯ ಕಥಾಭಾಗವು ಇರುತ್ತಿದ್ದು ಸುಶೀಲೆಯ ಮತ್ತು ಮಹೇಶನ ಬಂಧುಭಗಿನಿ ಪ್ರೇಮವೂ ಮಾನಸಿಂಸನ ಮತ್ತು ಸುಶೀಲೆಯ ಪತಿಪತ್ನಿ ಪ್ರೇಮವೂ ಅದ್ಭುತವಿರುವ ದರಿಂದ ಈ ಕಾದಂಬರಿಗೆ ನಾನು "ಅದ್ಭುತಪ್ರೇಮ"ವೆಂದು ಹೆಸರಿಟ್ಟಿರು ತ್ತೇನೆ. ಈ ಕಾದಂಬರಿಯನ್ನು ನನ್ನ ಕನ್ನಡ ಬಂಧುಭಗಿನಿಯರು ಓದಿ ಆನಂದ ಪಡಲೆಂದು ನಾನು ಇದನ್ನು ಕನ್ನಡ ವಾಙ್ಮಯಕ್ಕೆ ಪ್ರೇಮಪೂರ್ವ ಕವಾಗಿ ಸಮರ್ಪಿಸಿರುತ್ತೇನೆ.

ಈ ಕಾದಂಬರಿಗೆ ಕರ್ನಾಟಕ ವಿದ್ಯಾವರ್ಧಕ ಸಂಘದವರು ಇನಾಮು ಕೊಟ್ಟದ್ದು ಇದು ಶೀವ್ರವಾಗಿಯೇ ನನ್ನ ಕನ್ನಡ ಬಂಧುಭಗಿನಿ ಯರಿಗೆ ಪ್ರಿಯಕರವಾದೀತೆಂದು ನಾನು ನಂಬುತ್ತೇನೆ.

ಧಾರವಾಡ,
ತಾ. ೨೭–೧–೧೯೧೮.

ಗ. ಹು. ಹೊನ್ನಾಪುರಮಠ,
ಗ್ರಂಥಕರ್ತ

# ೨ನೇ ಆವೃತ್ತಿಯ ಪ್ರಸ್ತಾವನೆ.

ಇದನ್ನು ಮುಂಬಯಿ ಇಲಾಖೆಯ ವಿದ್ಯಾಖಾತೆಯವರು ಇನಾಮಿನ ಪುಸ್ತಕವೆಂತಲೂ ಲೈಬ್ರರಿಯ ಪುಸ್ತಕವೆಂತಲೂ ಮಂಜೂರುಮಾಡಿದ್ದಾರೆ. ಈ ಪುಸ್ತಕದ ಯಾವತ್ತು ಪ್ರತಿಗಳು ತೀರಿದ್ದು ಇದರ ಬೇಡುವಿಕೆಯು ಹೆಚ್ಚು ಇರುವದರಿಂದ ಇದರ ೨ನೇ ಆವೃತ್ತಿಯನ್ನು ನಾನು ಈಗ ಮುದ್ರಿಸಿರುತ್ತೇನೆ. ಇದಕ್ಕೆ ನನ್ನ ಕನ್ನಡ ಬಂಧುಭಗಿನಿಯರು ಇನ್ನು ಮೇಲೆ ಹೆಚ್ಚಾಗಿ ಆಶ್ರಯಕೊಡುವರೆಂದು ನಾನು ತುಂಬಾ ನಂಬಿದ್ದೇನೆ.

ಧಾರವಾಡ,
ತಾ. ೧-೧-೧೯೨೮.

ಗ. ಹು. ಹೊನ್ನಾಪುರಮಠ,
ಗ್ರಂಥಕರ್ತ.

# ವಿಷಯಾನುಕ್ರಮಣಿಕೆ.


| ಭಾಗ | | ಪುಟ. |
|---|---|---|
| ೧. | ಸುಶೀಲೆಯ ಪಟವು | ೧—೬ |
| ೨. | ಗೌಪ್ಯ ಸ್ಫೋಟನವು | ೬—೧೭ |
| ೩. | ಕಡೆಯ ಚಿಟ್ಟಿಯು | ೧೭—೨೧ |
| ೪. | ಮಹೇಶನ ಪತ್ರವು | ೨೧—೨೯ |
| ೫. | ಸೆರೆ ಹಿಡಿದು ತಂದ ತರುಣಿಯು | ೨೯—೩೩ |
| ೬. | ರಾಜಪತ್ನಿ | ೩೩—೪೦ |
| ೭. | ಸವತಿಮತ್ಸರವು | ೪೦—೪೮ |
| ೮. | ಅಂತಃಪುರದ ಸಂತೋಷವು | ೪೮—೫೨ |
| ೯. | ನನಗೆ ಏನೂ ಆಗಬೇಕಾಗಿಲ್ಲ | ೫೨—೫೯ |
| ೧೦. | ಪರಸ್ತ್ರೀಯು | ೫೯—೬೨ |
| ೧೧. | ಪತಿವ್ರತೆಯು | ೬೨—೬೮ |
| ೧೨. | ದೈವದುರ್ವಿಪಾಕವು | ೬೮—೭೧ |
| ೧೩. | ನೀರೊಳಗೆ ಹಾರಿಕೊಂಡಳು | ೭೨—೭೪ |
| ೧೪. | ಮಲ್ಲಿಯೋ ಹೊರಟುಹೋದಳು | ೭೪—೮೪ |
| ೧೫. | ಚಮತ್ಕಾರಿಕ ಪತ್ರವು | ೮೪—೯೧ |
| ೧೬. | ಸಾಧ್ವಿಯು | ೯೧—೯೮ |
| ೧೭. | ಮಾನಸಿಂಹನ ಪಶ್ಚಾತ್ತಾಪವು | ೯೮—೧೦೩ |
| ೧೮. | ಅಂತ್ಯದರ್ಶನವು | ೧೦೪—೧೧೦ |
| ೧೯. | ಉಪಸಂಹಾರ | ೧೧೦—೧೧೩ |

# ಅದ್ಭುತ ಪ್ರೇಮು.

## (ಐತಿಹಾಸಿಕ ಕಾದಂಬರಿ.)

## ಭಾಗ ೧.

### ಸುಶೀಲೆಯ ಹಟವು.

"ಸುಶೀಲೇ! ನಡೆ ಏಳು. ಎಷ್ಟು ತಡಮಾಡುತ್ತೀ?"

"ನಾನು ಬರುವದಿಲ್ಲ."

"ಅದೇಕೆ?"

"ನೀವು ಮೊದಲಿಗೆ ಆಣೆಯನ್ನು ಮಾಡಿರಿ."

"ಎಂಥ ಹುಚ್ಚಿಯು ನೀನು! ನನ್ನ ಮಾತಿನ ಮೇಲೆ ನಿನ್ನ ವಿಶ್ವಾಸವಿಲ್ಲೇನು?"

"ಇದಕ್ಕೂ ಮುಂಚೆ ಇತ್ತು; ಇನ್ನು ಮುಂದೆ ಮಾತ್ರ ವಿಶ್ವಾಸವಿಡಲಾರೆನು."

"ಇಷ್ಟೊಂದು ಅವಿಶ್ವಾಸಕ್ಕೆ ಕಾರಣವೇನಾಯಿತು?"

"ಕಾರಣವನ್ನು ಹೇಳಬೇಕೆ? ನಿನ್ನೆ ರಾತ್ರಿ ನನಗೆ ತಿಳಿಯುಗೊಡದಂತೆ ಓಡಿಹೋಗುವ ಆಲೋಚನೆಯನ್ನು ನಡಿಸಿದವರು ನೀವೇ ಅಲ್ಲವೆ? ಇದರಿಂದ ನೀವು ನನ್ನ ಮೇಲೆ ಎಷ್ಟು ಪ್ರೇಮ ಮಾಡುತ್ತೀರೆಂಬುವದನ್ನು ಚನ್ನಾಗಿ ಮನಗಂಡೆನು." ಈ ಪ್ರಕಾರ ಮಾತ ಮಾತಾಡುತ್ತ ಸುಶೀಲೆಯು ತನ್ನ ಕಣ್ಣೊಳಗಿಂದ ನೀರು ಸುರಿಸಿದಳು.

ಮಹೇಶನ ಕುತ್ತಿಗೆಯ ನರಗಳು ದುಃಖದಿಂದ ಉಬ್ಬಿ ಹೋದ ಕಾರಣ ಅವನ ಬಾಯಿಂದ ಶಬ್ದಗಳು ಹೊರಡುವದು ಕಷ್ಟವಾಯಿತು. ಕಡೆಗೆ ಅವನು ಹಾಗೂ ಹೀಗೂ ಧೈರ್ಯ ಮಾಡಿ "ಸುಶೀಲೇ! ನಿನಗೇನು

ಹೇಳಲಿ? ನೀನು ನನ್ನ ಆರಾಧ್ಯದೇವತೆಯು. ನೀನು ನನ್ನ ಪರಮಪೂಜ್ಯ ದೈವತವು. ಲೋಹಚುಂಬಕದಂತೆ ನೀನು ನನ್ನ ಮನಸ್ಸನ್ನು ಆಕರ್ಷಣ ಮಾಡಿಕೊಂಡಿರುತ್ತೀ. ಜಗತ್ತಿನಲ್ಲಿ ನಿನ್ನ ಹೊರತಾಗಿ ನನಗೆ ಪೂಜ್ಯಳಾದ ಸ್ತ್ರೀಯಳು ಯಾವಳೂ ಇಲ್ಲ. ನೀನು ಅತಿಶಯ ಸುಂದರಿಯು. ಅತಿಶಯ ರೂಪವತಿಯು—" ಎಂದು ನುಡಿದನು.

ಸುಶೀಲೆಯು ದುಃಖದಿಂದ ತುಂಬಿದ್ದರೂ ಮಹೇಶನ ಮಾತು ಕೇಳಿ ಆವೇಶದಿಂದ ಅಂದದ್ದೇನಂದರೆ— "ನಾನು ಸುಂದರಿಯು—ಅತಿ ರೂಪ ವತಿಯು ಆಗಿರುವದರಿಂದಲೇ ನೀವು ನನ್ನ ಮೇಲೆ ಪ್ರೇಮ ಮಾಡುತ್ತಿರುವಿ ರೇನು? ನಾನು ಕಪ್ಪು ಅಥವಾ ಕುರೂಪಿಯಾಗಿದ್ದರೆ ನಿಮ್ಮ ಪ್ರೀತಿಗೆ ಪಾತ್ರಳಾಗುತ್ತಿದ್ದಿಲ್ಲವಷ್ಟೇ? ಅಂದಬಳಿಕ ನೀವು ಈಗ ನನ್ನಕಿಂತಲು ಹೆಚ್ಚು ಸೌಂದರ್ಯವುಳ್ಳ ಯಾವಳಾದರೂ ಸ್ತ್ರೀಯಳನ್ನು ನೋಡಿ ಮೋಹಿತರಾಗಿ ರುವ ಕಾರಣ ನನ್ನ ಮೇಲಿನ ನಿಮ್ಮ ಪ್ರೇಮವು ಹೊರಟು ಹೋಗಿರುತ್ತದೆಂದು ಹೇಳಲಿಕ್ಕೆ ಏನೂ ಸಂಶಯವಿಲ್ಲ. ಹಾಗೆ ಇರದಿದ್ದರೆ ನೀವು ನಿನ್ನೆ ಗುಪ್ತ ರೀತಿಯಿಂದ ಓಡಿ ಹೋಗುವ ವಿಚಾರವನ್ನು ನಿಮ್ಮ ಮನಸ್ಸಿನಲ್ಲಿ ಎಂದೂ ತರುತ್ತಿದ್ದಿಲ್ಲ."

"ನಿನಗೇನು ಹೇಳಲಿ? ಪರಮೇಶ್ವರನು ಮನುಷ್ಯರಿಗೆ ಎರಡನೆ ಯವರ ಹೃದಯವನ್ನು ನೋಡಲಿಕ್ಕೆ ಕಣ್ಣು ಕೊಟ್ಟದ್ದರೆ ನನ್ನ ಹೃದಯದಲ್ಲಿ ನಿನ್ನ ಬಗ್ಗೆ ಎಷ್ಟು ಪ್ರೇಮವೂ, ಪೂಜ್ಯಬುದ್ಧಿಯೂ ವಾಸವಾಗಿರುತ್ತವೆಂಬು ವದು ನಿನಗೆ ಕಾಣಿಸುತ್ತಿತ್ತು. ನನ್ನ ಹೃದಯದೊಳಗಿನ ಸ್ಥಿತಿಯು ಆ ಸರ್ವಾಂತರ್ಯಾಮಿ ಪರಮೇಶ್ವರನೊಬ್ಬನಿಗೆ ಗೊತ್ತು! ಸೌಂದರ್ಯವು ಅಸ್ಥಿರವಿರುವದು ನಿಜವು. ಆದರೆ ಪ್ರೇಮವು ಸಹ ಅಸ್ಥಿರವಿರುವದೆಂದು ನೀನು ತಿಳಿದಿರುವಿಯಾ? ಸುಶೀಲೇ, ಸುಗಂಧಪುಷ್ಪವು ಪೂರ್ಣವಾಗಿ ಅರಳಿದ ಬಳಿಕ ಅದು ನಾಲ್ಕೂ ದಿಕ್ಕಿನಲ್ಲಿ ತನ್ನ ಸುಗಂಧವನ್ನು ಬೀರಿ ಕೆಲವು ಹೊತ್ತಿನ ನಂತರ ದೇಟಿನಿಂದ ಕಡಿದುಕೊಂಡು ಬಿದ್ದು ಮಣ್ಣೊಳಗೆ ಕೂಡಿ ಹೋಗುವದು. ಆದ್ದರಿಂದ ಆ ಹೂವಿನ ನೆನವು ನಮ್ಮಲ್ಲಿಂದ ಬೇಗನೆ ಹೊರಟು ಹೋದರೂ ಅದು ಬೀರಿದ ಸುಗಂಧವು ಹೊರಟು ಹೋಗುವದೇ?

ಯುವ್ವನವು ತೀರಿದ ಬಳಿಕ ಸೌಂದರ್ಯವು ನಷ್ಟವಾದರೂ ಪ್ರೇಮವು ನಷ್ಟ ವಾಗುವದೇ? ಮುರಲಿಯು ಮಧುರ ಸ್ವರವು ಮಂದಮಾರುತನೊಂದಿಗೆ ತರಂಗಿಸುತ್ತ ಕರ್ಣಾನಂದವನ್ನುಂಟುಮಾಡಿದ ಬಳಿಕ ಅದರ ಗಾಯನದ ನೆನವು ನಮಗೆ ಕೆಲವುಹೊತ್ತಿನ ತರುವಾಯ ಉಳಿಯದಿದ್ದರೂ ಆ ಮಧುರ ಸ್ವರವನ್ನು ಮರೆಯಲಿಕ್ಕೆ ಆಗುವದೇ? ಯುವ್ವನವು ಮುಗಿದ ಮೇಲೆ ಸೌಂದರ್ಯವೂ, ದೇಹವು ನಾಶ ಹೊಂದಿದ ಮೇಲೆ ರೂಪವೂ ನಾಶ ಹೊಂದುವವು. ಆದರೆ ಪ್ರೇಮವು ಮಾತ್ರ ಅಕ್ಷಯವಾಗಿರುವದು. ಅದು ಅಮರವಾದದ್ದು. ಆದರೆ ಅದೆಲ್ಲ ಈಗ ಒಂದು ಬದಿಗಿರಲಿ. ನೀನು ಬೇಗನೆ ಮನೆಗೆ ನಡೆ. ತಾತನು ನಮ್ಮ ದಾರಿಯನ್ನು ನೋಡುತ್ತಿರ ಬಹುದು."

ಮಹೇಶನು ಈ ಪ್ರಕಾರ ಮಾಡಿದ ಭಾಷಣವನ್ನು ಸುಶೀಲೆಯು ಏನೂ ಲಕ್ಷಿಸದೆ ಘಟ್ಟವನ್ನು ಒತ್ತರದಿಂದ ಇಳಿದು ಹಿಂದೆ ಮೋರೆ ತಿರುವಿ ನೋಡದೆ ಒಮ್ಮೆಲೆ ನದಿಯೊಳಗೆ ಹಾರಿಕೊಂಡು ಈಸಹತ್ತಿದಳು. ಹಾಗೂ ಅವಳು ಈಸುವಾಗ ಮಹೇಶನಿಗೆ—"ಅಹಹಾ! ಈ ಸಮಯದಲ್ಲಿ ಭಾಗೀ ರಥಿಯ ಶೀತಲೋದಕದಿಂದ ನನ್ನ ಮನಸ್ಸಿಗೆ ಎಷ್ಟು ಸೌಖ್ಯವಾಗಿರುತ್ತದೆಂದು ಹೇಳಲಿ? ನೀವೂ ಬರ್ರಿ" ಎಂದು ನುಡಿದಳು.

ಸುಶೀಲೆಯು ಈ ಆಶ್ಚರ್ಯಕರವಾದ ನಡತೆಯನ್ನು ಮಹೇಶನು ನೋಡಿ—"ಸುಶೀಲೇ, ನೀನು ಹುಚ್ಚಿಯಾಗಿಲ್ಲವಷ್ಟೇ? ಇದು ಈಸಾಡುವ ಹೊತ್ತೇ? ನೀನು ಈ ಪ್ರಕಾರ ಮೊಂಡತನವನ್ನು ಮಾಡಬೇಡ. ಬೇಗನೆ ಹೊರಗೆ ಬಾ. ಇಂಥ ಹೊತ್ತಿನಲ್ಲಿ ನೀನು ನೀರೊಳಗೆ ಈಸುಬಿದ್ದರೆ ನಿನ್ನ ಸೂಕ್ಷ್ಮವಾದ ಪ್ರಕೃತಿಗೆ ಅಪಾಯವಾದೀತು" ಎಂದನು.

"ನನ್ನ ಪ್ರಕೃತಿಗೆ ಅಪಾಯವಾಗುವದೇ? ಛೇ, ಅದು ಎಂದಿಗೂ ಆಗಲಿಕ್ಕಿಲ್ಲ. ಈ ಶೀತಲವಾದ ಜಲೋತ್ತರಣದಿಂದ ನನ್ನ ಪ್ರಕೃತಿಗೆ ಎಷ್ಟು ಸೌಖ್ಯವಾಗಹತ್ತಿರುತ್ತದೆ! ನನ್ನ ಅಂತಃಕರಣದೊಳಗಿನ ದಾಹವು ಎಷ್ಟು ಶಾಂತವಾಗಹತ್ತಿರುತ್ತದೆ! ಆದ್ದರಿಂದ ನಾನು ಈ ಪವಿತ್ರವಾದ ಗಂಗಾ ನದಿಯ ಶೀತಲೋದಕದಲ್ಲಿ ಮುಳುಗಿ ಅದರ ಗರ್ಭಪಾತ್ರದಲ್ಲಿ ಹೋಗಿ

ಕುಳಿತರೆ ನನ್ನ ಶರೀರದ ಯಾವತ್ತು ದಾಹವು ಒಮ್ಮೆಲೆ ಶಾಂತವಾದೀತೆಂದು ನೆನೆಸುತ್ತೇನೆ" ಎಂದು ಸುಶೀಲೆಯು ಉತ್ತರಕೊಟ್ಟಳು.

ಇದನ್ನು ಕೇಳಿ ಮಹೇಶನು ಆಶ್ಚರ್ಯಚಕಿತನಾಗಿ "ಛೇ ಸುಶೀಲೇ, ಏನು ಅಮಂಗಲವನ್ನು ನುಡಿಯುತ್ತೀ? ನೀನು ಬೇಗನೆ ನೀರೊಳಗಿಂದ ಹೊರಗೆ ಬರುವಿಯೋ ಇಲ್ಲೋ? ಅಥವಾ ನಾನೇ ಒಳಗೆ ಇಳಿದು ಬರ ಬೇಕೋ?" ಎಂದು ನುಡಿದನು.

ಇದಕ್ಕೆ ಸುಶೀಲೆಯು ನಗನಗುತ್ತ ಉತ್ತರ ಕೊಟ್ಟದ್ದೇನಂದರೆ:— "ಹಾಗಾದರಂತೂ 'ಕಬ್ಬಿನ ಮೇಲೆ ಜೇನು ಇಟ್ಟಂತೆ' ಆದೀತು! ನಾವಿಬ್ಬರೂ ಕೂಡಿ ಒಮ್ಮೆಲೆ ಈ ಶೀತಲೋದಕದೊಳಗೆ ಮುಳಗೋಣ. ಪ್ರೀಯರೇ ಬರ್ರಿ. ಶೀವ್ರವಾಗಿ ಒಳಗೆ ಬರ್ರಿ, ನಾವು ಈ ಸುಖದಾಯನಿಯಾದ ಭಾಗೀರಥಿಯು ಗರ್ಭದಲ್ಲಿರುವ ಸುಂದರವಾದ ಸುವರ್ಣ ಸಿಂಹಾಸನದ ಮೇಲೆ ಹೋಗಿ ಕುಳಿತು, ಅಕ್ಷಯ ಸುಖವನ್ನು ಅನುಭೋಗಿಸೋಣ! ಆ ಬಳಿಕ ನಿಮಗೆ ನನ್ನನ್ನು ತಪ್ಪಿಸಿ ಓಡಿ ಹೋಗುವ ಪ್ರಸಂಗವೂ, ನನಗೆ ನಿಮ್ಮ ವಿರಹ ದುಃಖವನ್ನು ಸಹನ ಮಾಡಿಕೊಳ್ಳುವ ಪ್ರಸಂಗವೂ ತಾವೇ ನಿರಾಯಾಸದಿಂದ ತಪ್ಪಿ ಹೋಗುವವು."

ಸುಶೀಲೆಯ ಈ ನಿರ್ಧಾರವಾದ ಭಾಷಣವನ್ನು ಕೇಳಿ ಮಹೇಶನು ಹೆದರಿ ನಡಗುತ್ತ "ಸುಶೀಲೇ! ಸುಶೀಲೇ! ನಾನು ನಿನ್ನ ಕಾಲು ಬೀಳು ತ್ತೇನೆ. ಬೇಗನೆ ಹೊರಗೆ ಬಾ. ಅಕೋ ನೋಡು. ಶಂಖಧ್ವನಿಯೂ ಘಂಟಾನಾದವೂ ಕೇಳಬರುತ್ತವೆ. ಆರುತಿ ಮಾಡುವ ಸಮಯವು ಸಮೀ ಪಿಸಿತು."

ಆದರೆ ಹಟಮಾರಿಯಾದ ಸುಶೀಲೆಯು ಮಹೇಶನ ವಿನಂತಿಗೆ ಕಿವಿ ಗೊಡದೆ ನೀರೊಳಗೆ ಮುಂದ ಮುಂದಕ್ಕೆ ಈಸುತ್ತ ಹೋಗಿ ನಗೆಯಿಂದ ಅಂದದ್ದೇನಂದರೆ:— "ಇನ್ನು ಮುಂದೆ ನಾನು ನಿಮ್ಮ ಮಾತಿಗೆ ಮೋಸ ಬೀಳಲಿಕ್ಕಿಲ್ಲ! ನಿಮ್ಮ ಸವಿಮಾತುಗಳಿಗೆ ನಾನು ಇಷ್ಟು ದಿವಸ ಮರುಳಾ ಗಿದ್ದಂತೆ ಇನ್ನು ಮುಂದೆ ಮರುಳಾಗಲಾರೆನು ನೀವು ನನಗೆ ಇನ್ನೂ ಅಜ್ಞಾನಿಯಾದ ಕೂಸೆಂದು ತಿಳಿದುಕೊಳ್ಳಬೇಡಿರಿ. ನನಗೆ ನಿಮ್ಮ ಯಾವತ್ತು

ಕಪಟವು ಪೂರ್ಣವಾಗಿ ಗೊತ್ತಾಗಿರುತ್ತದೆ. ನಾನು ಈ ಹೊತ್ತು ಈ ಭಾಗೀರಥಿಯ ಶೀತಲೋದಕದಲ್ಲಿ ನನ್ನ ಶರೀರದೊಳಗಿನ ಯಾವತ್ತು ದಾಹವನ್ನು ಒಮ್ಮೆಲೆ ಶಾಂತಪಡಿಸುವೆನು. ನೀವು ಆಣೆಯನ್ನು ಮಾಡಿದರೆ ಮಾತ್ರ—"

ಮಹೇಶನು ಒದರಿ ಅಂದದ್ದು—"ನಾನು ಆಣೆಯನ್ನು ಮಾಡುತ್ತೇನೆ! ಆಣೆಯನ್ನು ಮಾಡುವದು ಪಾಪವೆಂದು ಗುರುಗಳು ಹೇಳಿದ್ದರೂ ನಿನಗೋಸ್ಕರ ಆ ಪಾಪವನ್ನು ಮಾಡಲಿಕ್ಕೆ ಸಿದ್ಧನಾಗಿರುತ್ತೇನೆ. ನಡೆ; ನಾನು ಆಣೆಯನ್ನು ಮಾಡುತ್ತೇನೆ. ಏನೆಂದು ಆಣೆ ಮಾಡಲಿ? ಬೇಗ ಹೇಳು."

ಈ ಶಬ್ದಗಳು ಸುಶೀಲೆಯ ಕಿವಿಗೆ ಬಿದ್ದ ಕೂಡಲೆ ಅವಳು ಪ್ರಸನ್ನ ಮುದ್ರೆಯಿಂದ ಥಟಕ್ಕನೆ ತಿರುಗಿ ನದಿಯೊಳಗಿಂದ ಹೊರಗೆ ಬಂದು ಮಹೇಶನಗೂಡ ಮಾತಾಡಬೇಕೆನ್ನುವಷ್ಟರಲ್ಲಿ "ಸುಶೀಲೇ" ಎಂದು ಯಾರೋ ಗಂಭೀರ ಧ್ವನಿಯಿಂದ ಒದರಿದಂತೆ ಕೇಳಿಸಿತು. ಆಗ ಆಕೆಯು ಸ್ವಲ್ಪ ಗಾಬರಿಯಾಗಿ ಮೇಲಕ್ಕೆ ನೋಡಲು ತನ್ನ ತಾತನಾದ ವೃದ್ಧ ತಪಸ್ವಿಯು ಘಟ್ಟದ ಕೆಳಗೆ ಇಳಿದು ಬರುವದನ್ನು ಕಂಡಳು. ಆಗ ಆಕೆಯು ಮಹೇಶನನ್ನೂ ಮಹೇಶನಿಂದ ಆಣೆ ಮಾಡಿಸುವದನ್ನೂ ಅಷ್ಟಕ್ಕೇ ಬಿಟ್ಟುಕೊಟ್ಟು ಆ ತಪಸ್ವಿಯು ದೃಷ್ಟಿಗೆ ಬೀಳದಂತೆ ಲಗಬಗೆಯಿಂದ ಆಶ್ರಮದ ಕಡೆಗೆ ಹೊರಟು ಹೋದಳು. ಮಹೇಶನಾದರೂ ಕ್ಷಣಾರ್ಧದಲ್ಲಿ ಅದೃಶ್ಯನಾದನು

ಸುಶೀಲೆಯು ತಾರುಣ್ಯದಿಂದ ತುಂಬಿ ತುಳುಕುತ್ತಿದ್ದದರಿಂದಲೂ ಆಕೆಯು ಉಟ್ಟು ತೊಟ್ಟ ಸೀರಿ ಕುಪ್ಪಸಗಳು ಭಾಗೀರಥಿಯಿಂದ ತೊಯ್ದು ಒದ್ದಿಯಾದ್ದರಿಂದಲೂ ಆಕೆಯ ದೇಹಕ್ಕೆ ಉಂಟಾಗಿದ್ದ ಸೌಂದರ್ಯದ ಶೋಭೆಯನ್ನು ಕೇವಲ ಕಲ್ಪನೆಯ ಸಹಾಯದಿಂದ ತಿಳಿದುಕೊಳ್ಳಬೇಕಲ್ಲದೆ ಅದನ್ನು ವರ್ಣಿಸುವದು ಅಸಾಧ್ಯವದೆ! ಆ ಸೌಂದರ್ಯದ ಶೋಭೆಯನ್ನು ಪ್ರತ್ಯಕ್ಷವಾಗಿ ನೋಡಲಿಕ್ಕೆ ಆ ಸಮಯದಲ್ಲಿದ್ದಂಥ ಅಂಧಃಪ್ರಕಾಶವೂ ಆಕಾಶದಲ್ಲಿ ಚಮಕಿಸುತ್ತಿದ್ದ ಒಂದೆರಡು ನಕ್ಷತ್ರಗಳೂ ವನಶ್ರೀಯು ಕ್ರೀಡೆ

ಯನ್ನು ಅನುಭೋಗಿಸಿ ಶ್ರಮಪಟ್ಟದ್ದರಿಂದ ಶ್ವಾಸ ಬಿಡುತ್ತಿದ್ದ ಸಂಧ್ಯಾ ಕಾಲದ ಮಾರುತನೂ ಮಾತ್ರ ಭಾಗ್ಯವಂತರು!!

# ಭಾಗ ೨.

## ಗೌಪ್ಯ ಸ್ಫೋಟನವು.

ಮಧ್ಯರಾತ್ರಿಯಾದ್ದರಿಂದ ನಾಲ್ಕೂ ಕಡೆಗೆ ಕಗ್ಗತ್ತಲವು ಬಿದ್ದಿತ್ತು. ಎಲ್ಲಿ ನೋಡಿದಲ್ಲಿ ಸಂಪೂರ್ಣವಾದ ಸ್ತಬ್ಧತೆಯು ನೆಲೆಗೊಂಡಿತ್ತು. ಸಕಲ ಪ್ರಾಣಿಮಾತ್ರಗು ನಿದ್ರಾವಶರಾಗಿದ್ದರು ಇಂಥ ಹೊತ್ತಿನಲ್ಲಿ ತಪಸ್ವಿಯ ಪರ್ಣಕುಟಿಯೊಳಗೆ ಮಿಣಿ ಮಿಣಿ ದೀಪವು ಉರಿಯುತ್ತಿತ್ತು. ಆಗ ತಪಸ್ವಿಯು ದರ್ಭಾಸನದ ಮೇಲೆ ಕುಳಿತು, ತನ್ನ ಕೈಯಲ್ಲಿ ತಾಡವಾಲಿಯನ್ನು ಹಿಡಿದುಕೊಂಡು, ವೇದದೊಳಗಿನ ಶ್ಲೋಕಗಳನ್ನು ಓದುತ್ತ, ಆ ಶ್ಲೋಕಗಳಿಗೆ ತನ್ನಷ್ಟಕ್ಕೆ ಟೀಕೆಯನ್ನು ಮಾಡುತ್ತ ಕುಳಿತಿದ್ದನು. ಇಂಥ ಹೊತ್ತಿನಲ್ಲಿ ಪರ್ಣಕುಟಿಯ ಬಾಗಿಲವನ್ನು ತೆರೆದು ಒಬ್ಬಾನೊಬ್ಬ ವ್ಯಕ್ತಿಯು ಒಳಗೆ ಬಂದನು. ಬಾಗಿಲದ ಸಪ್ಪಳವನ್ನು ಕೇಳಿದ ಕೂಡಲೆ ತಪಸ್ವಿಯು ತನ್ನ ಮೋರೆಯನ್ನು ಮೇಲಕ್ಕೆತ್ತಿ ನೋಡಿದನು. ಆ ಕಗ್ಗತ್ತಲೊಳಗಿಂದ ಆಗಂತುಕನಾಗಿ ಬಂದು ಈಗೀಗ ಒಳಗೆ ಕಾಲಿಡುತ್ತಿದ್ದ ವ್ಯಕ್ತಿಯ ಗುರುತು ತಪಸ್ವಿಗೆ ಚನ್ನಾಗಿ ಹತ್ತಲಿಲ್ಲ. ಆದ್ದರಿಂದ ತಪಸ್ವಿಯು "ಯಾರವರು?" ಎಂದು ಪ್ರಶ್ನೆಮಾಡಿದನು.

ಅದಕ್ಕೆ ಆ ಆಗಂತುಕನು ಏನೂ ಉತ್ತರ ಕೊಡದೆ ಮುಂದೆ ಬಂದು ಒಮ್ಮೆಲೆ ತಪಸ್ವಿಯ ಚರಣಗಳ ಮೇಲೆ ತನ್ನ ಮಸ್ತಕವನ್ನಿಟ್ಟನು. ಆಗ ತಪಸ್ವಿಯು ಅವನನ್ನು ಎಬ್ಬಿಸಿ "ಬಾಲಕಾ ಮಹೇಶಾ, ಏನಿದು? ರಾತ್ರಿಯೊಳಗೆ ಯಾಕೆ ಬಂದಿ? ಸುಶೀಲೆಯು ಕ್ಷೇಮದಿಂದಿರುತ್ತಾಳಷ್ಟೇ?" ಎಂದು ಕೇಳಿದನು.

"ಗುರುವರ್ಯರೇ—" ಮಹೇಶನ ಬಾಯಿಂದ ಮುಂದೆ ಶಬ್ದಗಳು ಹೊರಡಲಿಲ್ಲ. ಅವನ ಕುತ್ತಿಗೆಯ ಶಿರಗಳು ಉಬ್ಬಿದವು. ಕಣ್ಣೀರು

ಸುರಿಯ ಹತ್ತಿದವು. ಇದನ್ನು ನೋಡಿ ತಪಸ್ವಿಯು ಮತ್ತಿಷ್ಟು ಗಾಬರಿಯಾಗಿ "ವತ್ಸಾ ಯಾಕೆ ಅಳುತ್ತೀ? ಏನಿದ್ದದ್ದನ್ನು ಸ್ಪಷ್ಟವಾಗಿ ಹೇಳು" ಎಂದನು.

ಆದರೂ ಮಹೇಶನು ಸ್ತಬ್ಧನಾಗಿದ್ದನು. ಏನೂ ಮಾತಾಡಲಿಲ್ಲ. ಆಗ ಆ ತಪಸ್ವಿಯು ಬಹಳ ವಿಚಾರ ಮಾಡುವಲ್ಲಿ ತೊಡಗಿದನು. ಇದರ ಕಾರಣವೇನಿರಬಹುದೆಂಬದನ್ನು ತರ್ಕಿಸಲಿಕ್ಕೆ ಸಹ ತಪಸ್ವಿಯಿಂದ ಆಗಲಿಲ್ಲ. ಉಭಯತರು ಪರಸ್ಪರರ ಮೋರೆಯನ್ನು ದೃಷ್ಟಿಸಿ ನೋಡಹತ್ತಿದರು ಕಡೆಗೆ ಮಹೇಶನು ತನ್ನ ಮನಸ್ಸನ್ನು ಗಟ್ಟಿ ಮಾಡಿ ಅಂದದ್ದೇನಂದರೆ— "ಗುರು ದೇವರೇ! ತಾವು ಯಾವತ್ತು ಶಾಸ್ತ್ರಪಾರಂಗತರು ಇರುತ್ತೀರಿ. ಆದ್ದರಿಂದ ಶಾಸ್ತ್ರದಲ್ಲಿ ಕಪಟಾಚರಣಕ್ಕೆ ಯಾವ ಪ್ರಾಯಶ್ಚಿತ್ತವು ವಿಧಿಸಿರುತ್ತದೆಂಬುವದನ್ನು ನನಗೆ ದಯಮಾಡಿ ತಿಳಿಸಿರಿ."

ತಪಸ್ವಿಯು ಹೆಚ್ಚು ಆಶ್ಚರ್ಯಚಕಿತನಾಗಿ ಅಂದದ್ದು — "ನೀನು ಈ ಪ್ರಶ್ನೆಯನ್ನು ಕೇಳಲಿಕ್ಕೆ ಇಂಥ ಹೊತ್ತಿನಲ್ಲಿ ಯಾಕೆ ಬಂದಿ? ನಿನ್ನ ಧ್ವನಿಯು ಯಾಕೆ ಕುಗ್ಗಿರುತ್ತದೆ? ಏನಿರುವದನ್ನು ಸ್ಪಷ್ಟವಾಗಿ ಹೇಳು"

ಇದನ್ನು ಕೇಳಿ ಮಹೇಶನು ಭಯದಿಂದ ನಡಗುತ್ತ— "ತಾವು ನನಗೆ ಮುಂಚಿತವಾಗಿ ಪ್ರಾಯಶ್ಚಿತ್ತವನ್ನು ಹೇಳಿರಿ. ಅಂದರೆ ನಾನು ಯಾವತ್ತು ಸಂಗತಿಯನ್ನು ನಿಮಗೆ ಸವಿಸ್ತಾರವಾಗಿ ಹೇಳುವೆನು. ಗುರುಗಳ ಕೂಡ ಕಪಟಾಚಾರಣವನ್ನು ಮಾಡಿದವನಿಗೆ ಏನು ಪ್ರಾಯಶ್ಚಿತ್ತವು ವಿಧಿಸಲ್ಪಟ್ಟಿರುವದು?"

"ಎಂಟು ದಿವಸ ಉಪೋಷಣ ಮಾಡಿದರೆ ಅದರ ಕ್ಷಾಲನವಾಗುತ್ತದೆ."

ಮಹೇಶನು ಕೆಲವು ಹೊತ್ತಿನ ವರೆಗೆ ಸುಮ್ಮನೆ ನಿಂತನು. ಅವನು ತನ್ನಷ್ಟಕ್ಕೆ ಏನೋ ವಿಚಾರ ಮಾಡುವಲ್ಲಿ ತೊಡಗಿದ್ದನು ಆ ಬಳಿಕ ಅವನು "ಈ ಪ್ರಾಯಶ್ಚಿತ್ತವು ಬಹಳ ಸುಲಭವಾದದ್ದಿರುತ್ತದೆ. ತಮ್ಮ ಶಾಸ್ತ್ರಕಾರರು ಈ ಪ್ರಾಯಶ್ಚಿತ್ತ ವಿಧಿಯನ್ನು ಬಹಳ ದಯಾಲುತನದಿಂದ ನಿರ್ಣಯಿಸಿದ್ದಾರೆ. ಇದಕ್ಕಿಂತ ದೊಡ್ಡ ಕಠೋರವಾದ ಶಿಕ್ಷೆಯನ್ನು ಅವರು ಹೇಳಿಲ್ಲವೇನು?"

ಆಗ ತಪಸ್ವಿಯು ಕಿಂಚಿತ್ತು ವಿರಕ್ತ ಸ್ವರದಿಂದ "ವತ್ಸಾ! ನನ್ನ ನಿತ್ಯ ನಿಯಮದಲ್ಲಿ ವ್ಯತ್ಯಯವನ್ನು ತರಬೇಡ. ಏನಿರುವದನ್ನು ಬೇಗನೆ ಸ್ಪಷ್ಟವಾಗಿ ಹೇಳಿ ಹೊರಟು ಹೋಗು" ಎಂದು ಅಂದನು. ಈ ಸಮಯಕ್ಕೆ ಮಹೇಶನ ಕಣ್ಣೊಳಗಿಂದ ಒಂದೇಸವನೆ ಕಣ್ಣೀರುಗಳು ಉದುರಲಿಕ್ಕೆ ಹತ್ತಿದವು. ಅವನು ಸದ್ಗದಿತ ಕಂಠದಿಂದ:—"ಗುರುಗಳೇ! ನರಾಧಮನಾದ ನಾನು ನಿಮ್ಮಗೂಡ ಕಪಟದಿಂದ ನಡೆದಿರುತ್ತೇನೆ ನಾನು ಹಿಂದೂ ಧರ್ಮದವನು ಅಲ್ಲದೆ ಕಪಟವೇಷವನ್ನು ಧರಿಸಿ ನಿಮ್ಮ ಪವಿತ್ರಾಶ್ರಮವನ್ನು ಅಪವಿತ್ರವಾಗಿ ಮಾಡಿರುತ್ತೇನೆ."

ಈ ಶಬ್ದಗಳನ್ನು ಕೇಳಿದ ಕೂಡಲೆ ಆ ತಪಸ್ವಿಯ ಸ್ಥಿತಿಯು, ಭಯಂಕರವಾದ ಸರ್ಪವನ್ನು ಕಂಡು ಒಮ್ಮೆಲೆ ಭಯದಿಂದ ಹಿಂದಕ್ಕೆ ಸರಿಯುವ ಮನುಷ್ಯನಂತೆ ಆಯಿತು. ಆಗ ಆ ತಪಸ್ವಿಯು "ಹಾಗಾದರೆ ನೀನು ಯಾವ ಧರ್ಮದವನು? ಸ್ಪಷ್ಟವಾಗಿ ಹೇಳು." ಎಂದು ಕೇಳಿದನು.

"ನಾನು ಮುಸಲ್ಮಾನನು"

"ಏನು? ಮುಸಲ್ಮಾನನೇ!! ಹೀಗಿದ್ದು ನೀನು ನನ್ನ ಶಿಷ್ಯತ್ವವನ್ನು ಸ್ವೀಕರಿಸಿ ನನ್ನನ್ನು ಸಂಪೂರ್ಣವಾಗಿ ಮೋಸಪಡಿಸಿದಿಯಾ?"

ಆ ತಪಸ್ವಿಯು ಶಾಂತ—ಗಂಭೀರ—ಕ್ಷಮಾಶೀಲ—ದಯಾಶೀಲ—ಧೈರ್ಯಶೀಲ—ಮುದ್ರೆಯನ್ನು ಯಾವಾಗಲು ನೋಡುತ್ತಿದ್ದ ಕೋಮಲ ಹೃದಯವುಳ್ಳ ಮಹೇಶನು ಈ ಸಮಯದಲ್ಲಿ ತಪಸ್ವಿಯು ಧಾರಣಮಾಡಿದ ಕೃತಾಂತ ಮುದ್ರೆಯನ್ನು ನೋಡಿ ಹೌಹಾರಿ ನಡುಗಹತ್ತಿದನು. ಅವನು ತಪಸ್ವಿಯ ಚರಣಗಳನ್ನು ಗಟ್ಟಿಯಾಗಿ ಹಿಡಿದು "ಸ್ವಾಮಿನ್! ನಾನು ಮಹಾ ಅಪರಾಧವನ್ನು ಮಾಡಿರುತ್ತೇನೆ. ಕ್ಷಮಿಸಬೇಕು. ನಾನು ಜಾತಿಯಿಂದ ಯವನನಾಗಿದ್ದರೂ ನೀಚವಂಶದವನು ಮಾತ್ರ ಇರುವದಿಲ್ಲ. ಹಿಂದುಸ್ಥಾನದ ಸಾರ್ವಭೌಮ ಬಾದಶಹನಾದ ಅಕಬರನು ನನಗೆ ತನ್ನ ಒಡಹುಟ್ಟಿದ ತಮ್ಮನೆಂದು ತಿಳಿಯುತ್ತಾನೆ. ಈ ಅಧಮನ ಹೆಸರು ಫೈಜಿ.—"

ಆ ತಪಸ್ವಿಯು ಮಹೇಶನ ಮೋರೆಯಕಡೆಗೆ ಬಹಳೊತ್ತು ದೃಷ್ಟಿಸಿ ನೋಡಿ ಅಂದದ್ದು:—"ನೀನು ಫೈಜಿಯೋ! ಯಾವ ಪಂಡಿತ ಶ್ರೇಷ್ಠನಾದ

ಫೈಜಿಯ ಹೆಸರು ನಾನು ಕೇಳುತ್ತಿದ್ದೆನೋ ಅವನು ನೀನೋ? ಒಳ್ಳೇದು. ವತ್ಸಾ, ಹಿಂದೂ ಧರ್ಮವು ನೀನು ತಿಳಕೊಂಡ ಮೇರೆಗೆ ನಿರ್ದಯವಾದ ದ್ದಿರುವದಿಲ್ಲ. ನೀನು ಹಿಂದೂ ಜಾತಿಯವನೆಂತಲೂ ಬ್ರಾಹ್ಮಣ ಪುತ್ರ ನೆಂತಲೂ ತಿಳಿದುಕೊಂಡು ನಾನು ನಿನಗೆ ಆಶ್ರಯ ಕೊಟ್ಟು ವೇದ ಪಠಣ ವನ್ನು ಮಾಡಿಸಿದೆನು. ಯವನರೊಳಗೆ ಇಂಥಾ ಲೋಕೋತ್ತರವಾದ ಬುದ್ಧಿಸಾಮರ್ಥ್ಯವು ಇರುತ್ತದೆಂಬದರ ಕಲ್ಪನೆಯು ಸಹ ನನಗೆ ಈ ಹೊತ್ತಿನ ವರೆಗೆ ಇದ್ದಿಲ್ಲ. ನಿನ್ನ ಬುದ್ಧಿಸಾಮರ್ಥ್ಯವನ್ನೂ, ಶುದ್ಧ ವರ್ತನವನ್ನೂ ಉಳಿದ ಸದ್ಗುಣಗಳನ್ನೂ ಕಂಡು ನಿನ್ನಂಥ ಸಚ್ಛೀಲ—ವಿದ್ಯಾಭಿಲಾಷಿ ಶಿಷ್ಯನು ಲಭಿಸಿದ್ದಕ್ಕಾಗಿ ನಾನು ಸ್ವತಃ ಧನ್ಯನೆಂದು ತಿಳಿದುಕೊಂಡಿದ್ದೆನು. ನೀನು ಯವನನಿದ್ದರೂ ನನ್ನ ಪ್ರಿಯ ಶಿಷ್ಯನೇ ಇರುತ್ತೀ. ಶಿಷ್ಯರು ಪುತ್ರರ ಕಿಂತಲು-ಕಿಂಬಹುನಾ ಪ್ರಾಣದಕಿಂತಲು—ಪ್ರಿಯರಿರುವರು. ನಾನು ನಿನ್ನ ಯಾವತ್ತು ಅಪರಾಧಗಳನ್ನು ಕ್ಷಮಿಸಿರುತ್ತೇನೆ. ಆದರೆ ವತ್ಸಾ! ನೀನು ಈ ಸಂಗತಿಯನ್ನು ನನಗೆ ಮೊದಲೇ ಯಾಕೆ ಹೇಳಲಿಲ್ಲ? ಹೇಳದಿದ್ದರೂ ಚಿಂತಿಲ್ಲ; ಈಗಾದರೂ ನನ್ನ ಮುಂದೆ ಯಾಕ ಹೇಳಿದಿ? ಕಡೆತನಕ ಯಾಕೆ ಗುಪ್ತವಾಗಿಡಲಿಲ್ಲ?"

ಮಹೇಶನು—ಈಗ ಪ್ರಕಟವಾದ ಫೈಜಿಯು—ಸ್ವಲ್ಪ ಧೈರ್ಯ ದಿಂದ ಮಾತಾಡಿದ್ದೇನಂದರೆ:—"ದಯಾನಿಧಿಯೇ, ಕಾರಣವಿಲ್ಲದೆ ಕಾರ್ಯ ವು ಸಂಭವಿಸುವದಿಲ್ಲ. ಗುರುತು ತಿಳಿಸುವ ಹೊತ್ತು ಬಂದದ್ದರಿಂದಲೇ ನಾನು ನಿಮಗೆ ತಿಳಿಸಿದ್ದೇನೆ. ನಾನು ಇಲ್ಲಿ ಬಂದ ಉದ್ದೇಶವಂತೂ ಸಂಪೂರ್ಣವಾಯಿತು ಅಕಬರ ಬಾದಶಹರವರು ತಾವು ಹಿಂದೂಜನ ರಿಗೆ ಪ್ರಿಯಕರರಾಗುವಂತೆ ರಾಜ್ಯಭಾರ ಮಾಡುವದಕ್ಕಾಗಿ ಹಿಂದೂಜನರ ಆಚಾರವಿಚಾರಗಳನ್ನೂ, ಧರ್ಮಪದ್ಧತಿಗಳನ್ನೂ, ಕರ್ಮಕ್ರಿಯಾದಿ ಗಳನ್ನೂ ಚನ್ನಾಗಿ ತಿಳಿದುಕೊಳ್ಳುವದು ಯುಕ್ತವೆಂದು ಆಲೋಚಿಸಿ ನನಗೆ ಸಂಸ್ಕೃತವನ್ನು ಅಧ್ಯಯನ ಮಾಡಿಕೊಂಡುಬರುವದಕ್ಕಾಗಿ ಈ ಶಿಷ್ಯವೃತ್ತಿ ಯನ್ನು ಸ್ವೀಕರಿಸಲಿಕ್ಕೆ ಅಪ್ಪಣೆಯನ್ನು ಮಾಡಿದ್ದರು. ಹಿಂದೂಮುಸಲ್ಮಾ ನರು ಬಂಧುಪ್ರೇಮದಿಂದ ನಡೆದು ಉಭಯತರು ಒಮ್ಮನಸ್ಸಿನಿಂದಲೂ

ಒಕ್ಕಟ್ಟಿನಿಂದಲೂ ರಾಷ್ಟ್ರದ ಅಭ್ಯುದಯಕ್ಕಾಗಿ ಪ್ರಯತ್ನ ಮಾಡಬೇಕೆಂದು ಬಾದಶಹರವರ ಸ್ತುತ್ಯ ಉದ್ದೇಶವಿರುವದರಿಂದ ಅವರು ನನ್ನಂತೆ ಅನೇಕ ಉಚ್ಚ ವಂಶೀಯ ವಿಶ್ವಾಸಿಕರಾದ ಮುಸಲ್ಮಾನ ಜನರನ್ನು ಹಿಂದೂ ವೇಷದಿಂದ ಹಿಂದೂ ಜನರಗೂಡ ಇದ್ದು ಅವರ ಆಚಾರವಿಚಾರಗಳನ್ನೂ, ಧರ್ಮಶಾಸ್ತ್ರವನ್ನೂ, ಕರ್ಮಕ್ರಿಯಾದಿಗಳನ್ನೂ ಕಲಿತುಕೊಂಡು ಬರಲಿಕ್ಕೆ ಆಯಾಯ ಭಾಗಗಳಿಗೆ ಕಳಿಸಿಕೊಟ್ಟಿರುತ್ತಾರೆ. ಗುರುಗಳೇ! ನಾನು ದಿಲ್ಲೀ ರಾಜಧಾನಿಗೆ ಹೋದ ಬಳಿಕ ಬಾದಶಹರ ದರಬಾರದಲ್ಲಿ ಹಿಂದೂ ಜಾತಿಯ ವಿದ್ಯಾವಂತರನ್ನು ಹೆಚ್ಚಿಗೆ ಪ್ರವೇಶ ಮಾಡಿಸುವದಕ್ಕೂ ಹಿಂದೂ ಜಾತಿಯ ಉತ್ಕರ್ಷ ಮಾಡುವದಕ್ಕೂ, ಹಿಂದೂ ದೇವತೆಗಳ ಪೂಜ್ಯತೆಯನ್ನು ಹೆಚ್ಚು ಮಾಡುವದಕ್ಕೂ, ಪ್ರಯತ್ನ ಮಾಡುವೆನೆಂದು ನಾನು ನಿಮ್ಮ ಪವಿತ್ರ ಚರಣಗಳನ್ನು ಸ್ಮರಿಸಿ ವಚನ ಕೊಡುತ್ತೇನೆ."

ಫೈಜಿಯ ಭಾಷಣವನ್ನು ಕೇಳಿ ಆ ತಪಸ್ವಿಯು ಸ್ವಲ್ಪ ಹೊತ್ತಿನ ತನಕ ತನ್ನ ಮನಸ್ಸಿನೊಳಗೆ ವಿಚಾರ ಮಾಡುತ್ತ ಸುಮ್ಮನೆ ಕುಳಿತುಕೊಂಡನು. ಆ ಬಳಿಕ ಅವನು ಅಂದದ್ದು :—"ವತ್ಸಾ! ಈ ನಿನ್ನ ಪ್ರಶಂಸನೀಯವಾದ ಉದ್ದೇಶವನ್ನೂ ವಿಲಕ್ಷಣವಾದ ಬುದ್ಧಿಚಾತುರ್ಯವನ್ನೂ ನೋಡಿ ನಾನು ಸಂತುಷ್ಟನಾಗಿರುತ್ತೇನೆ ನಾನು ನಿನಗೆ ವಿದ್ಯಾದಾನ ಮಾಡಿದ್ದು ಸಾರ್ಥಕವಾಯಿತು. ಸತ್ಪಾತ್ರನಲ್ಲಿಯೇ ಬೀಜಾರೋಪಣವಾದಂತಾಯಿತು. ಆದರೆ ನೀನು ಈ ಗೌಪ್ಯಸ್ಫೋಟನ ಮಾಡಲಿಕ್ಕ ಎರಡನೇದ್ದೇನಾದರೂ ಕಾರಣವಿರಬಹುದು. ಅದನ್ನು ನನ್ನ ಮುಂದೆ ಯಥಾಸ್ಥಿತವಾಗಿ ಹೇಳು. ಎಷ್ಟು ಮಾತ್ರಕ್ಕೂ ಅಂಜಬೇಡ."

ಅದಕ್ಕೆ ಫೈಜಿಯು ಉತ್ತರ ಕೊಟ್ಟದ್ದು—"ಗುರುಗಳೇ! ಕೇಳಿರಿ. ನಾನು ಆಶ್ರಮಕ್ಕೆ ಬಂದಾರಭ್ಯ ಸುಶೀಲೆಯು ನನ್ನಗೂಡ ಸಹೋದರಿಯಂತೆ ನಡೆಯುತ್ತಿದ್ದಳು. ನಾವಿಬ್ಬರೂ ಅತ್ಯಂತ ಸ್ನೇಹದಿಂದ ಕೂಡಿ ಆಡಿ, ಕೂಡಿ ಬೆಳೆದೆವು. ನಮ್ಮಿಬ್ಬರ ಪವಿತ್ರ ಸ್ನೇಹವು ನಮ್ಮ ಯವ್ವನದಲ್ಲಿ ಅನ್ಯರೂಪವನ್ನು ಧರಿಸೀತೆಂಬ ಕಲ್ಪನೆಯು ನನ್ನ ಮನಸ್ಸಿನೊಳಗೆ ಒಂದು ಕ್ಷಣಹೊತ್ತು ಸಹ ಬಂದಿದ್ದಿಲ್ಲ. ನಾನು ಇಲ್ಲಿ ಬಂದ ದಿವಸದಿಂದ ಸುಶೀಲೆಯನ್ನು ನನ್ನ

ಸಹೋದರಿಯೆಂತಲೇ ತಿಳಿದುಕೊಂಡು ನಡೆದಿದ್ದೇನೆ. ನನ್ನ ಪ್ರಾಣವಿರುವ ತನಕ ನಾನು ಆಕೆಯುಗೂಡ ಹೀಗೆಯೇ ನಡೆದು, ಆಕೆಯ ಸೌಖ್ಯವನ್ನೂ ಕಲ್ಯಾಣವನ್ನೂ ಮಾಡಲಿಕ್ಕೆ ಎಂದೂ ತಪ್ಪಲಿಕ್ಕಿಲ್ಲ ಆದರೆ ಆ ಪವಿತ್ರ ಬ್ರಾಹ್ಮಣ ಕನ್ನಿಕೆಯು ನನ್ನ ಪ್ರಿಯ ಗುರುಭಗಿನಿಯಾಗಿದ್ದರೂ, ಅವಳು ತನ್ನ ಅಜ್ಞಾನದಿಂದಲೋ? ಯವ್ವನದ ಚೇಷ್ಟೆಯಿಂದಲೋ? ಈ ಅಧಮನ ಮೇಲೆ ಅಪವಿತ್ರವಾದ ಪ್ರೇಮವನ್ನು ಮಾಡಲಿಕ್ಕೆ ಹತ್ತಿರುತ್ತಾಳೆ! ನಾನು ನಿರ್ಮ್ಮೊಡನೆ ಭಯಂಕರವಾದ ಕಪಟಾಚರಣವನ್ನು ಮಾಡಿರುತ್ತಿದ್ದರೂ ಪ್ರಿಯ ಭಗಿನಿಯೊಡನೆ ಕಪಟಾಚರಣ ಮಾಡುವ ಸಾಹಸವು ಈ ದೇಹದಲ್ಲಿ ಪ್ರಾಣ ವಿರುವ ತನಕ ನನ್ನ ಕೈಯಿಂದ ಸರ್ವಥಾ ಆಗದು! ಸ್ತ್ರೀ ಹೃದಯದೊಳ ಗಿನ ಪವಿತ್ರ ಪ್ರೇಮದ ಸೆಳವು ಎಷ್ಟು ಬಲವುಳ್ಳದ್ದಿರುತ್ತದೆಂದು ನನಗೆ ಗೊತ್ತಿರುತ್ತದೆ. ನನ್ನ ಮನಸ್ಸು ಎಷ್ಟು ದೃಢವಾಗಿದ್ದರೂ, ನಾನು ಆ ಸೆಳವಿಗೆ ಬೀಳದೆ ಉಳಿಯುವೆನೆಂದು ನಿಶ್ಚಯವಾಗಿ ಹೇಳಲಾರೆನು. ಪವಿತ್ರ ಪ್ರೇಮಕ್ಕೆ ಕಲಂಕ ಹಚ್ಚುವದೂ ನಂದನ ವನಕ್ಕೆ ನರಕದ ಸ್ವರೂಪವನ್ನು ಕೊಡುವದೂ ಮಹಾ ಪಾತಕವಿರುತ್ತದೆ. ಆದ್ದರಿಂದ ನಾನು ಇನ್ನುಮುಂದೆ ಇಲ್ಲಿ ಇರಲಾರೆನು."

ಈ ಪ್ರಕಾರ ಫೈಜಿಯು ಮಾಡಿದ ಭಾಷಣವನ್ನು ಕೇಳಿ ಆ ತಪಸ್ವಿಯು ಬಹಳ ಚಿಂತಾಗ್ರಸ್ತನಾದನು. ಆದ್ದರಿಂದ ಅವನು ಬಹಳೊತ್ತಿನಕ ಒಂದು ತುಟಿ ಎರಡು ಮಾಡದೆ ಮನಸ್ಸಿನೊಳಗೆ ವಿಚಾರ ಮಾಡಿ ಇನ್ನುಮೇಲೆ ಉಭಯತರನ್ನು ಒತ್ತಟ್ಟಿಗೆ ಇರಗೊಡುವದು ಯೋಗ್ಯವಲ್ಲವೆಂದು ನಿರ್ಧರಿಸಿದನು. ಇದರಂತೆ ಅವನು ತನ್ನ ಮನಸ್ಸಿನಲ್ಲಿ ಇನ್ನೂ ಅನೇಕ ಸಂಕಲ್ಪಗಳನ್ನು ಮಾಡಿ ಒಮ್ಮಿಂದೊಮ್ಮೆ ಪ್ರೇಮಸ್ವರದಿಂದ "ಮಹೇಶಾ" ಎಂದು ಕೂಗಿದನು.

ತಪಸ್ವಿಯು ಗಂಭೀರವಾದ ಮತ್ತು ವಿಚಾರಮಗ್ನವಾದ ಮುದ್ರೆಯನ್ನು ನೋಡಿ ಅವನ ಮನಸ್ಸಿನೊಳಗಿನ ವಿಚಾರವನ್ನು ಫೈಜಿಯು ಸಾಧಾರಣವಾಗಿ ತರ್ಕಿಸಿ "ಗುರುವರ್ಯರೇ! ಏನಪ್ಪಣೆಯಾಗುತ್ತದೆ?" ಎಂದು ಕೇಳಿದನು. ಅದಕ್ಕೆ ತಪಸ್ವಿಯು—"ಸುಶೀಲೆಯು ಎಚ್ಚರಾಗುವ ಮುಂಚೆ ಈಗಿಂದೀ ಗಲೇ ನೀನು ಈ ಆಶ್ರಮವನ್ನು ಬಿಟ್ಟು ಹೊರಟು ಹೋಗು. ಒಂದು

ಕ್ಷಣಸಹ ತಡಮಾಡಬೇಡ” ಎಂದು ಹೇಳಿದನು. ಆಗ ಮಹೇಶನು– “ಗುರುಗಳೇ! ನೀವು ಆಜ್ಞೆಯನ್ನು ಮಾಡುವ ಮುಂಚೆಯೇ ನಾನು ಆ ಪ್ರಕಾರ ಮಾಡಬೇಕೆಂದು ನನ್ನ ಮನಸ್ಸಿನಲ್ಲಿ ನಿಶ್ಚಯಮಾಡಿ ನಿಮ್ಮ ನಿರೂಪ ವನ್ನು ತೆಗೆದುಕೊಳ್ಳುವದಕ್ಕಾಗಿ ಇಲ್ಲಿ ಬಂದಿದ್ದೇನೆ. ರಾತ್ರಿಯು ಮುಗಿ ಯುತ್ತ ಬಂತು. ಇನ್ನು ನಾನು ಇಲ್ಲಿ ನಿಲ್ಲಲಿಕ್ಕೆ ವೇಳೆಯು ಉಳಿಯಲಿಲ್ಲ. ನನ್ನ ಎಲ್ಲ ಅಪರಾಧವನ್ನು ಕ್ಷಮಿಸಿ ನನಗೆ ನಿರೂಪವನ್ನು—”

ಫೈಜಿಯ ಬಾಯಿಯೊಳಗಿಂದ ಮುಂದೆ ಶಬ್ದಗಳು ಹೊರಬೀಳದಂತೆ ಆದವು. ಅವನ ಕಣ್ಣೊಳಗಿಂದ ಒಂದೇಸವನೆ ನೀರು ಹರಿಯಹತ್ತಿದವು. ಅವನು ತಪಸ್ವಿಯ ಚರಣಗಳ ಮೇಲೆ ತನ್ನ ಮಸ್ತಕವನ್ನಿಟ್ಟು ತನ್ನ ಕಣ್ಣುಗ ಳಿಂದ ಬಂದ ಬಿಸಿನೀರಿನಿಂದ ತಪಸ್ವಿಯ ಚರಣಸ್ನಾನ ಮಾಡಿಸಿದನು. ಆ ಸಮಯದ ಹೃದಯದ್ರಾವಕ ಪ್ರಸಂಗವನ್ನು ಎಷ್ಟೆಂದು ವರ್ಣಿಸಬೇಕು! ಯಾವತ್ತು ಮನೋವಿಕಾರಗಳನ್ನು ಗೆದ್ದಂಥ ತಪಸ್ವಿಗೆ ಸಹ ತನ್ನ ಪ್ರಿಯ ಶಿಷ್ಯನಾದ ಮಹೇಶನ ವಿರಹ ದುಃಖವನ್ನು ತಡೆದುಕೊಳ್ಳುವದು ಕಠಿಣ ವಾಗಿ ಹೋಯಿತು. ಅವನ ಹೃದಯವು ಸ್ನೇಹರಸದಿಂದಲೂ ಪ್ರೇಮ ರಸದಿಂದಲೂ ತುಂಬಿಹೋದ್ದರಿಂದ ಅವನ ಕಣ್ಣೊಳಗಿಂದ ಕಂಬನಿಗಳು ಮಳೆಯಂತೆ ಸುರಿದವು. ಫೈಜಿಯ ಮಸ್ತಕವೆಲ್ಲ ತೊಯ್ದುಹೋಯಿತು. ಉಭಯತರು ಬಹಳೊತ್ತಿನಕ ತಮ್ಮ ಅಂತಃಕರಣವನ್ನು ಬಿಗಿಹಿಡಿಯಲಿಕ್ಕೆ ಅಸಮರ್ಥರಾದರು. ಅಪರಾಧಿಯು ಮಾಡಿದ ಅಪರಾಧವು ಎಷ್ಟು ದೊಡ್ಡ ದಿದ್ದಾಗ್ಯೂ ಅವನು ತಾನೇ ತನ್ನ ಅಪರಾಧದ ಕ್ಷಾಲನಮಾಡುವದಕ್ಕಾಗಿ ಅನನ್ಯ ಭಾವದಿಂದ ಬೇಡಿಕೊಂಡ ಬಳಿಕ ಅವನ ಬಗ್ಗೆ ದಯ ಹುಟ್ಟದೆ ಹೇಗೆ ಉಳಿಯಬೇಕು? ನ್ಯಾಯಮಂದಿರದ ನ್ಯಾಯ ಪದ್ಧತಿಯು ಹೇಗಿದ್ದರೂ ಇರಲಿ, ಮನುಷ್ಯನ ಹೃದಯದ ಸ್ಥಿತಿಯು ಮೇಲೆ ವರ್ಣಿಸಿದಂತೆ ಇರುವದು ಸ್ವಾಭಾವಿಕವದೆ. ಫೈಜಿ ಮತ್ತು ತಪಸ್ವಿ ಈ ಉಭಯತರ ಗುರುಶಿಷ್ಯ ಸಂಬಂಧವನ್ನೂ ಫೈಜಿಯ ಪವಿತ್ರವಾದ ಉದ್ದೇಶವನ್ನೂ ಲಕ್ಷದಲ್ಲಿ ತಂದರೆ ತಪಸ್ವಿಯು ಫೈಜಿಯ ಅಪರಾಧಕ್ಕಾಗಿ ಫೈಜಿಯನ್ನು ಶಾಸನಮಾಡುವನೆಂದು ತಿಳಿಯುವದು ಸಹ ಅಯೋಗ್ಯವೇ ಸರಿ. ಫೈಜಿಯಂಥ ಪಂಡಿತನು ಕೇವಲ

ಜಗತ್ತಿನ ಕಲ್ಯಾಣವಮಾಡುವದಕ್ಕಾಗಿ ರಾಜಾಜ್ಞೆಯನ್ನನುಸರಿಸಿ ದೇಶಾಂತರ ಮಾಡಿ ಜ್ಞಾನಾರ್ಜನವಮಾಡಿದರೆ ಇದರಲ್ಲಿ ಅಪರಾಧವೇನದೆ? ಮೇಲಾಗಿ ತಪಸ್ವಿಯು ಕಾಮಕ್ರೋಧಾದಿ ದುರ್ವ್ಯಾಸಾರಗಳಿಂದ ಅಲಿಪ್ತನಾದವನು. ತಪಸ್ವಿಯ ಆಶ್ರಮವು ಬರೇ ವಿದ್ಯಾಪೀಠವಲ್ಲದೆ ಭೂತದಯದ ಮತ್ತು ಪರೋಪಕಾರ ಬುದ್ಧಿಯ ಕೇಂದ್ರಸ್ಥಾನವು. ಇದಲ್ಲದೆ ತಪಸ್ವಿಯು ಫೈಜಿಯನ್ನು ತನ್ನ ಪ್ರಾಣದಕಿಂತಲು ಹೆಚ್ಚು ತಿಳಕೊಂಡು ಅವನೊಡನೆ ಮಮತೆಯನ್ನು ಮಾಡುತ್ತಿದ್ದನು. ಅಂದಮೇಲೆ ತಪಸ್ವಿಯ ಅಂತಃಕರಣದಲ್ಲಿಫೈಜಿಯ ಬಗ್ಗೆ ಪ್ರೇಮದ ಮಳೆಗರೆಯುತ್ತಿತ್ತೆಂಬದರಲ್ಲಿ ಆಶ್ಚರ್ಯವೇನೂ ಇಲ್ಲ. ಮಹೇಶನ ಮೇಲೆ ತಪಸ್ವಿಯ ಪ್ರೇಮವು ಸಂಪೂರ್ಣವಿದ್ದದರಿಂದಲೂ ಮಹೇಶನನ್ನು ತಪಸ್ವಿಯು ಪುತ್ರವತ್ ತಿಳಿದುಕೊಂಡು ತನ್ನ ಜ್ಞಾನ ಭಾಂಡಾರವನ್ನು ಅವನಿಗೆ ಒಪ್ಪಿಸಿದ್ದರಿಂದಲೂ ತಪಸ್ವಿಯು ಮಹೇಶನಿಗೆ ಸುಶೀಲೆಯೊಡನೆ ನಿಕಟಸಹವಾಸವನ್ನು ಮಾಡಲಿಕ್ಕೆ ಸ್ವತಂತ್ರವನ್ನು ಕೊಟ್ಟಿದ್ದನು. ಸುಶೀಲೆ ಮತ್ತು ಮಹೇಶ ಇವರ ನಡುವೆ ಬಹಳ ಸ್ನೇಹವು ಇದ್ದದ್ದನ್ನು ನೋಡಿ, ತಪಸ್ವಿಗೆ ಎಂದೂ ವಿಷಾದವು ಅಥವಾ ಅಸಮಾಧಾನವು ಆಗಿದ್ದಿಲ್ಲ. ಉಭಯತರೊಳಗಿನ ಅಕೃತ್ರಿಮ ಪ್ರೇಮವನ್ನೂ ಪರಸ್ಪರ ಆದರ ಬುದ್ಧಿಯನ್ನೂ ನೋಡಿ ತಪಸ್ವಿಗೆ ಯಾವಾಗಲು ಆನಂದವಾಗುತ್ತಿತ್ತು. ಉಭಯತರ ಸ್ನೇಹವೂ ಪ್ರೇಮವೂ ಆದರವೂ ಉಭಯತರ ಪ್ರೇಮಲ ಅಂತಃಕರಣದಿಂದ ಮತ್ತು ಅವರ ನಿಕಟಸಹವಾಸದಿಂದ ಉತ್ಪನ್ನವಾಗಿರುತ್ತವೆಂಬದು ತಪಸ್ವಿಗೆ ಪೂರ್ಣವಾಗಿ ಗೊತ್ತಿತ್ತು. ಆದರೆ ಕಾಲಾಂತರದಿಂದ ಈ ವಿಕಾರವು ಅನ್ಯರೀತಿಯಿಂದ ಪ್ರಬಲವಾದೀತೆಂಬ ಕಲ್ಪನೆಯು ಮಾಯಾಮೋಹಗಳನ್ನು ತ್ಯಜಿಸಿದಂಥ ಆ ತಪಸ್ವಿಯ ಮನಸ್ಸಿನಲ್ಲಿ ಎಷ್ಟುಮಾತ್ರಕ್ಕೂ ಬಂದಿದ್ದಿಲ್ಲ. ಆದರೆ ಈಹೊತ್ತು ತಪಸ್ವಿಯ ಭ್ರಮವು ದೂರಾಯಿತು! ಜ್ಞಾನಿಗಳು ತಮ್ಮದೇ ಅಭಿಪ್ರಾಯವು ಸರಿಯಾದದ್ದೆಂದು ಹಟಹಿಡಿಯುವದಿಲ್ಲ. ಅಥವಾ ತನ್ನ ಅಭಿಪ್ರಾಯವು ತಪ್ಪೆಂದು ತೋರಿಸಿಕೊಡುವವರ ಮೇಲೆ ಸಿಟ್ಟಾಗುವದಿಲ್ಲ. ಜ್ಞಾನಿಗಳು ಅಂಥವರ ಸಂಗಡ ಹೆಚ್ಚು ಕೃತಜ್ಞತೆಯಿಂದ ನಡೆಯುತ್ತಾರೆ. ಆದ್ದರಿಂದ ಫೈಜಿಯ ಬಗ್ಗೆ ತಪಸ್ವಿಯ ಮನಸ್ಸಿ

ನಲ್ಲಿ ಏನೂ ಸಿಟ್ಟು ಬಾರದೆ ಹೆಚ್ಚು ಆದರವು ಉತ್ಪನ್ನವಾಯಿತು. ಮಹೇಶನ ಸಾತ್ವಿಕ ವೃತ್ತಿಯನ್ನೂ ಸರ್ವತ್ಯಾಗವನ್ನೂ ನಿಷ್ಪಾಪ ಬುದ್ಧಿಯನ್ನೂ ನೋಡಿ, ತಪಸ್ವಿಯಲ್ಲಿ ಮಹೇಶನ ಬಗ್ಗೆ ಮೊದಲಿನಕಿಂತ ಹೆಚ್ಚು ಪ್ರೇಮವು ಉತ್ಪನ್ನವಾಯಿತು. ಆದ್ದರಿಂದ ತಪಸ್ವಿಯು ಮಹೇಶನನ್ನು ಪ್ರೀತಿಯಿಂದ ಅಪ್ಪಿಕೊಂಡು "ವತ್ಸಾ! ನೀನು ಯವನನಿದ್ದರೂ ನಿನಗೆ ನಾನು ಯಾವಾಗಲು ಬ್ರಾಹ್ಮಣ ಪುತ್ರನಾದ ನನ್ನ ಪರಮಪ್ರಿಯ ಶಿಷ್ಯ ಮಹೇಶನೆಂದು ತಿಳಿಯುವೆನು. ನೀನು ಜನ್ಮದಿಂದ ಬ್ರಾಹ್ಮಣನಲ್ಲದಿದ್ದರೂ ಗುಣಗಳಿಂದ ಬ್ರಾಹ್ಮಣನೇ ಇರುತ್ತೀ! ನಿನ್ನನ್ನು ದಿಲ್ಲೀಶ್ವರನ ಮಿತ್ರನಾದ ಫೈಜಿಯೆಂದು ತಿಳಿದುಕೊಳ್ಳುವದಕ್ಕಿಂತ ನನ್ನ ಶಿಷ್ಯನಾದ ಮಹೇಶನೆಂದು ತಿಳಿದುಕೊಳ್ಳುವಲ್ಲಿ ನನಗೆ ಹೆಚ್ಚು ಅಭಿಮಾನವೆನಿಸುತ್ತದೆ. ನಮ್ಮಂಥ ಸಂಸಾರತ್ಯಾಗಿಗಳಾದ ಅರಣ್ಯವಾಸಿ ವಿರಕ್ತರಿಗೆ ಯಾವದೂ ಆಶೆಯು ಇರುವದಿಲ್ಲ. ನೀನು ಜಾತಿಯಿಂದ ಮ್ಲೇಂಛನಿರುವದರಿಂದ ನಮ್ಮ ಆಶ್ರಮವು ನಿನ್ನ ಸಹವಾಸದ ಮೂಲಕ ಅಪವಿತ್ರವಾಯಿತೆಂದು ನೀನು ತಿಳಿದುಕೊಂಡಿರುತ್ತೀ. ಅದು ಸಹ ಯೋಗ್ಯವಲ್ಲ. ಯಾಕಂದರೆ ಜಾತಿನಿರ್ಬಂಧಗಳು ಸಂಸಾರದಲ್ಲಿರುವವರಿಗೆ ಮಾತ್ರ ಇರುವವು. ನಾವು ತಪಸ್ವಿಗಳು ಸಮಾಜವನ್ನು ಬಿಟ್ಟು ಬೇರೇ ಇರತಕ್ಕವರು. ಅಂದಮೇಲೆ ನಾವು ಈ ಜಾತಿನಿರ್ಬಂಧಗಳನ್ನು ಎಂದೂ ಲಕ್ಷಕ್ಕೆ ತರುವದಿಲ್ಲ. ಆದ್ದರಿಂದ ನೀನು ಮನಸ್ಸಿನಲ್ಲಿ ಎಳ್ಳಷ್ಟಾದರೂ ಹಳಹಳಿಸಬೇಡ. ಜಾತಿಗಳು ಮನುಷ್ಯ ನಿರ್ಮಿತವೇ ಹೊರತು ಈಶ್ವರ ನಿರ್ಮಿತವಲ್ಲ. ಪರಮೇಶ್ವರನು ಕೊಟ್ಟ ಶ್ರೇಷ್ಠ ಮನೋವೃತ್ತಿಯನ್ನು ಕಾಪಾಡುವವನೇ ಈ ಜಗತ್ತಿನಲ್ಲಿ ಧನ್ಯನು! ಉಚ್ಛೃಂಖಲ ಮನೋವೃತ್ತಿಯನ್ನು ಜಯಿಸುವದಕ್ಕಿಂತ ಹೆಚ್ಚಿನ ಜಯವು ಯಾವದೂ ಇಲ್ಲ. ತನ್ನ ಮನಸ್ಸನ್ನು ಗೆದೆಯುವವನು ಜಗತ್ತನ್ನೇ ಗೆದೆಯುತ್ತಾನೆಂದು ತಿಳಿಯಬಹುದು. ಕರ್ತವ್ಯದಲ್ಲಿ ದೃಷ್ಟಿಯನ್ನಿಟ್ಟು ಯಾವತ್ತು ಮೋಹಕ್ಕೂ ಲೋಭಕ್ಕೂ ಸ್ವಂತ ಸೌಖ್ಯಕ್ಕೂ ನೀರು ಎರೆದಂಥ ನಿನ್ನ ಯೋಗ್ಯತೆಯನ್ನು ನಾನೇ ನನ್ನ ಬಾಯಿಂದ ವರ್ಣಿಸುವದು ಅಗತ್ಯವಿಲ್ಲ. ನೀನು ಪರಮ ಪವಿತ್ರನು; ಪರಮ ಶ್ರೇಷ್ಠನು! ನೀನು ಎಲ್ಲ ಸಂಗತಿಗಳನ್ನು ಮರೆತುಬಿಡು. ನಿನಗೆ ನಾನು ಕ್ಷಮೆಯನ್ನು ಮಾಡಿರುತ್ತೇನೆ.

ನೀನು ಒಂದು ಕ್ಷಣಹೊತ್ತು ಸಹ ವಿಲಂಬವಮಾಡದೆ ಒನ್ಮೆಲೆ ಈ ಆಶ್ರಮ ವನ್ನು ಬಿಟ್ಟು ದೂರ ಹೊರಟು ಹೋಗು ಸುಶೀಲೆಯ ಕಣ್ಣಿಗೆ ಬೀಳಬೇಡ. ವತ್ಸಾ! ಹೋಗು, ನಿನಗೆ ನನ್ನ ಪೂರ್ಣ ಆಶೀರ್ವಾದವುಂಟು. ಈಶ್ವರನು ನಿನಗೆ ಕಲ್ಯಾಣವನ್ನು ಮಾಡಲಿ" ಎಂದು ನುಡಿದನು.

"ನಿಮ್ಮ ಆಜ್ಞೆಯು ನನಗೆ ಶಿರಸಾವಮಾನ್ಯವದೆ. ಈ ನಮ್ರ ಶಿಷ್ಯನು ಗುರುಚರಣದ ಹತ್ತರ ಒಂದು ವಿನಂತಿಯನ್ನು ಮಾಡಿಕೊಳ್ಳುವದು ಮಾತ್ರ ಉಳಿದಿರುತ್ತದೆ ಅದೇನಂದರೆ:--"ನಾನು ಈಗ ಬಾದಶಹರ ಸನ್ನಿಧಾನಕ್ಕೆ ದಿಲ್ಲಿಗೆ ಹೋಗುವೆನು. ನಿಮಗೆ ಎಂದಾದರೂ ಈ ದಾಸನ ನೆನಪು ಆಗಿ ಈ ದಾಸನಿಗೆ ಏನಾದರೂ ಆಜ್ಞೆಯನ್ನು ಮಾಡುವ ಪ್ರಸಂಗವು ಬಂದರೆ ಆ ನಿಮ್ಮ ಆಜ್ಞೆಯ ಮೇರೆಗೆ ನಾನು ತತ್ಕಾಲವೇ ಹೊರಟು ಬರುವಗೋಸ್ಕರ ನನಗೆ ಈ ಮುದ್ರಿಕೆಯನ್ನುಕಳುಹಿಸಿರಿ. ಅಂದರೆ ನಾನು ಎಲ್ಲಿ ಇದ್ದರೂ ನಿಮ್ಮ ಬಳಿಗೆ ಹೊರಟು ಬಂದು ಗುರುಚರಣ ಸೇವೆಯನ್ನು ಮಾಡಿ ಕೃತಾರ್ಥ ನಾಗುವೆನು" ಎಂದು ಹೇಳಿ, ಒಂದು ಉಂಗುರವನ್ನು ತಪಸ್ವಿಗೆ ಅರ್ಪಣ ಮಾಡಿದನು. ಇಷ್ಟಾದ ಬಳಿಕ ಫೈಜಿಯು ಗುರುಚರಣದ ಮೇಲೆ ಮತ್ತೊಮ್ಮೆ ಮಸ್ತಕವನ್ನಿಟ್ಟು ತಪಸ್ವಿಯ ನಿರೂಪವನ್ನು ತೆಗೆದುಕೊಂಡು ಕ್ಷಣಾರ್ಧದಲ್ಲಿ ಆ ನಿಬಿಡಾರಣ್ಯದೊಳಗೆ ಅದೃಶ್ಯನಾದನು.

ತರುವಾಯ ತಪಸ್ವಿಯು ಪರ್ಣಕುಟಿಯ ಬಾಗಿಲವನ್ನು ಮುಚ್ಚಿ ದೀಪದ ಹತ್ತರ ಪುನಃ ಓದಲಿಕ್ಕೆ ಬಂದು ಕುಳಿತು ತಾಡವಾಲಿಯ ಗ್ರಂಥ ದೊಳಗಿನ ಒಂದು ವಾಲಿಯನ್ನು ಮೇಲಕ್ಕೆತ್ತಿ ನೋಡಲಾಗಿ ಆ ವಾಲಿಯೊಳ ಗಿನ ಅಕ್ಷರಗಳೇ ಅವನ ಕಣ್ಣಿಗೆ ಕಾಣಿಸದಂತೆ ಆದವು. ಆ ವಾಲಿಯು ಯಾವತ್ತು ಮಸಿಯೊರಿಸಿದಂತೆ ಕಾಣಿಸಿತು ಆ ತಾಡವಾಲಿಯ ಅಕ್ಷರ ಗಳೂ ತಾಡವಾಲಿಯೂ ದೀಪದ ಬೆಳಕೂ ಕರ್ರಗೆ ಕಾಣಿಸಿದವು! ಈ ಪ್ರಕಾರ ತಪಸ್ವಿಯ ಕಣ್ಣಿಗೆ ಕತ್ತಲಗೂಡಿಸಿಹೋದ್ದರಿಂದ ತಪಸ್ವಿಯ ಕಣ್ಣೊಳಗಿಂದ ಒಂದೇ ಸವನೆ ಕಣ್ಣೀರುಗಳು ಹರಿಯಹತ್ತಿದವು. ಆಗ ಅವನು ತಾಡವಾಲಿಗಳನ್ನು ಗಂಟುಕಟ್ಟಿಟ್ಟನು. ಪ್ರಪಂಚದ ಮಾಯಾ ಮೋಹಗಳನ್ನು ತ್ಯಾಜ್ಯಮಾಡಿದಂಥ ಆ ತಪಸ್ವಿಯು ಒಬ್ಬ ಯಃಕಶ್ಚಿತ

ಅಜ್ಞಾನ ಬಾಲಕನಂತೆ ಒಂದೇ ಸವನೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು. ಇಂಥ ಅಘೋರವಾದ ರಾತ್ರಿಯಲ್ಲಿ ನಿಬಿಡಾರಣ್ಯದೊಳಗಿಂದ ಹೊರಟು ಹೋಗೆಂದು ತನ್ನ ಪುತ್ರನಾದ ಪ್ರಿಯ ಮಹೇಶಗೆ ಹೇಳಿದ್ದು ಬಹಳ ಕ್ರೂರ ತನವಾಯಿತೆಂತಲೂ, ಮಹೇಶನು ತನಗೆ ಪುನಃ ಬೆಟ್ಟಿಯಾಗುವ ಆಶೆಯು ಉಳಿಯಲಿಲ್ಲವೆಂತಲೂ ತಪಸ್ವಿಯು ಮನಸ್ಸಿನಲ್ಲಿ ವಿಚಾರಮಾಡುತ್ತ ಮತ್ತಿಷ್ಟು ದುಃಖಪಟ್ಟನು. ಕಂಬನಿಗಳನ್ನು ಸುರಿಸುತ್ತ ಖಿನ್ನವದನನಾಗಿ ಹೊರಟು ಹೋದ ಮಹೇಶನ ಚಿತ್ರವು ತಪಸ್ವಿಯ ಕಣ್ಣಿನ ಮುಂದೆ ಮೂರ್ತಿಮಂತ ವಾಗಿ ನಿಂತುಕೊಂಡಿತು. ಆಗಂತೂ ಅವನು ತನ್ನ ತಪ್ಪಿನಗೋಸ್ಕರ ತನ್ನನ್ನು ಬಹಳವಾಗಿ ಹಳಿದುಕೊಳ್ಳುತ್ತ ಒಂದೇ ಸವನೆ ಬಹಳ ಶೋಕಮಾಡಹತ್ತಿ ದನು. ಅವನಿಗೆ ತಾನು ಕುಳಿತ ಸ್ಥಳದಲ್ಲಿ ಸಮಾಧಾನವೆನಿಸಲಿಲ್ಲ. ಆದ್ದ ರಿಂದ ಅವನು ಪರ್ಣಕುಟಿಯ ಹೊರಗೆ ಬಂದನು ಆ ಸಮಯದಲ್ಲಿ ಬೆಳ ಗಿನ ಜಾವು ಸಮೀಪಿಸಿತು. ಸೃಷ್ಟಿದೇವಿಯು ಅಹೋರಾತ್ರಿ ವಿಶ್ರಾಂತಿ ಸುಖವನ್ನು ಅನುಭೋಗಿಸಿ ಹೊಸ ಮನುಷ್ಯಳಂತೆ ಹೊಸ ಕಸುವಿನಿಂದಲೂ, ಉಲ್ಹಾಸದಿಂದಲೂ ನಿತ್ಯವಿಧಿಯನ್ನು ಆರಂಭಮಾಡುತ್ತಿದ್ದಳು. ಇಂಥ ಸೃಷ್ಟಿದೇವಿಯ ರಮಣೀಯ ಶೋಭೆಯನ್ನು ನೋಡಿದರೂ ವ್ಯಸನಾಂಧಃ ಕಾರದಲ್ಲಿ ಮುಳುಗಿದ್ದ ತಪಸ್ವಿಯ ಮನಸ್ಸಿಗೆ ಕಿಂಚಿತ್ತಾದರೂ ಸಮಾಧಾನ ಉಂಟಾಗಲಿಲ್ಲ. ತಪಸ್ವಿಯಾದ ತಾನು ಪ್ರಪಂಚದ ಮಾಯಾಮೋಹಗಳನ್ನು ಬಿಟ್ಟು ಅರಣ್ಯವಾಸಿಯಾಗಿದ್ದರೂ ಮಹೇಶನ ವಿರಹದುಃಖದಿಂದ ಬಳಲು ತ್ತಿದ್ದ ಕಾರಣ ತನ್ನನ್ನು ಕಂಡು ತನಗೆ ಅಪಹಾಸ್ಯಮಾಡುವದಕ್ಕಾಗಿ ಸೃಷ್ಟಿ ದೇವಿಯು ನಗುತ್ತಾಳೋ ಏನೋ ಎಂದು ಅವನಿಗೆ ತಿಳಿಯಿತು! ಆದ್ದರಿಂದ ಅವನು ತನ್ನ ಮೋರೆಯನ್ನು ಮೇಲಕ್ಕೆ ಮಾಡಿ ಆಕಾಶದ ಕಡೆಗೆ ನೋಡ ಲಾಗಿ ನಕ್ಷತ್ರಗಳು ನಿಸ್ತೇಜವಾಗುತ್ತ ನಡೆದಿದ್ದು ಅವು ತನ್ನ ಮೇಲೆ ಸಿಟ್ಟಾಗಿ ತಮ್ಮ ಮೋರೆಯನ್ನು ಅಡಗಿಸುತ್ತವೋ ಏನೋ ಎಂದು ಅವನಿಗೆ ಹೊಳೆ ಯಿತು! ನಕ್ಷತ್ರಗಳು ತಪಸ್ವಿಯ ದುಃಖವನ್ನು ಕಂಡು ನಿಜವಾಗಿ ಸಹಾನು ಭೂತಿ ಪರವಾದ ದುಃಖಪ್ರದರ್ಶನವನ್ನು ಮಾಡಿದರೂ ತಪಸ್ವಿಯು ಎಷ್ಟು ಮಾತ್ರಕ್ಕೂ ಸೌಖ್ಯವನ್ನು ಹೊಂದದೆ ಹೆಚ್ಚಿಗೆ ಶೋಕಾಕುಲನಾಗಿ ಮೈ

ಮರೆತು ದೊಡ್ಡ ಧ್ವನಿಯಿಂದ "ವತ್ಸಾ ಮಹೇಶಾ! ಹೋಗಬೇಡ! ಬಾ. ಬೇಗನೆ ಬಾ" ಎಂದು ಅನ್ನುತ್ತ ಅಳಹತ್ತಿದನು.

ತಪಸ್ವಿಯ ಕೂಗು ಮಹೇಶನ ಕಿವಿಗೆ ಬೀಳುವ ಬಗೆ ಹೇಗೆ? ಅವನು ಮೊದಲೇ ಅಲ್ಲಿಂದ ಹೊರಟು ಹೋಗಿದ್ದನು. ಆದ್ದರಿಂದ ಮಹೇಶನು ಪುನಃ ಅಲ್ಲಿಗೆ ಬರಲಿಲ್ಲ. ತಪಸ್ವಿಯು ಈ ಪ್ರಕಾರ ಶೋಕಾತಿಶಯದಿಂದ ಆ ಸ್ಥಳವನ್ನು ಬಿಟ್ಟು ಎರಡನೆ ಕಡೆಗೆ ಹೊರಟು ಹೋದನು.

# ಭಾಗ ೩.

## ಕಡೆಯ ಬೆಟ್ಟಿಯು.

ಬ್ರಾಹ್ಮಣವೇಷಧಾರಿಯಾದ ಫ್ರೈಜಿಯ ಪವಿತ್ರ ವರ್ತನದ ಬಗ್ಗೆ ತಪಸ್ವಿಯ ಅಂತಃಕರಣದಲ್ಲಿ ಅತ್ಯಂತ ಆದರಬುದ್ಧಿಯು ಉತ್ಪನ್ನವಾಗಿತ್ತೆಂಬದರಲ್ಲಿ ತಿಲಮಾತ್ರವಾದರೂ ಸಂಶಯವಿಲ್ಲ. ಆದರೆ ಯೋಗ್ಯವಿಚಾರಮಾಡಿ ನೋಡಲು ತಪಸ್ವಿಯ ಮನಸ್ಸಿನಲ್ಲಿ ಫ್ರೈಜಿಯ ಸ್ವಾರ್ಥತ್ಯಾಗದ ಕಲ್ಪನೆಯು ಬಂದಿದ್ದಿಲ್ಲ. ಅದರ ವಾಸನೆಯು ಮಾತ್ರ ತಪಸ್ವಿಗೆ ಸ್ವಲ್ಪ ಬಡಿತ್ತೆಂಬದಿಷ್ಟೇ ಸರಿ. ತಪಸ್ವಿಯು ಪಾಲನಮಾಡಿದಂಥ ಕುಮಾರಿಯ ಮೇಲೆ ಫ್ರೈಜಿಯ ಪ್ರೀತಿಯು ಇದಕ್ಕೂ ಮೊದಲು ಎಷ್ಟೋ ದಿವಸಗಳಿಂದ ನಟ್ಟಿತ್ತು. ಆದರೆ ಇವತ್ತಿನ ತನಕ ಸುಶೀಲೆಯ ಹೃದ್ಗತವು ತಪಸ್ವಿಯಂತೆ ಮಹೇಶನಿಗೂ ಗೊತ್ತಾಗಿದ್ದಿಲ್ಲ. ಫ್ರೈಜಿಯ ತನುಮನಗಳನ್ನು ಈ ಕುಮಾರಿಯು ತನ್ನ ಕಡೆಗೆ ವೇಧಿಸಿಕೊಂಡರೂ ಫ್ರೈಜಿಯು ತನ್ನ ಮನಸ್ಸನ್ನು ಗೆದ್ದು ಅವಳೊಡನೆ ಕೇವಲ ಬಂಧುಪ್ರೀತಿಯಿಂದ ನಡೆಯುತ್ತಿದ್ದನು. ನಿಜವಾಗಿಯೂ ಈ ಸಾಮರ್ಥ್ಯವು ದೊಡ್ಡ ದೊಡ್ಡ ತಪಸ್ವಿಗಳಿಗೂ ಸಹ ದುರ್ಲಭವು. ಆ ಹೊತ್ತಿನ ದಿವಸ ಫ್ರೈಜಿಯ ಮುಂದೆ ಸುಶೀಲೆಯು ತನ್ನ ಹೃದ್ಗತವನ್ನು ಪ್ರಕಟಮಾಡಲಾಗಿ ಫ್ರೈಜಿಯ ಮನಸ್ಸಿಗೆ ಕಚ್ಚು ಅನಿಸಿ ಅವನು ಅದೇ ರಾತ್ರಿ ತನ್ನ ಆಶ್ರಮವನ್ನೂ ಗುರುವನ್ನೂ ಸಖಿಯನ್ನೂ ತ್ಯಾಗಮಾಡಿದನು. ಸುಶೀಲೆಯು ತನ್ನಗೂಡ ಆಚರಿಸುವದನ್ನು ನೋಡಿ, ತಾನು ಅವಳ ಮುಂದೆ

ತನ್ನ ಪ್ಲೇಂಥತ್ವವನ್ನು ಪ್ರಕಟಿಸಿದರೂ ಅವಳ ಆಚರಣವನ್ನು ಬಿಡಿಸುವದು ಅಶಕ್ಯವೆಂದು ಫೈಜಿಗೆ ಪೂರ್ಣವಾಗಿ ಗೊತ್ತಾಗಿತ್ತು. ಪ್ರೇಮೋಘವನ್ನು ತಡೆಯುವದು ಮನುಷ್ಯನಿರ್ಮಿತವಾದ ಕಾಲ್ಪನಿಕ ತೊಂದರೆಗಳಿಂದ ಶಕ್ಯವಲ್ಲವೆಂತಲೂ ತಾನೇ ಸುಶೀಲೆಯ ಕಣ್ಣಿಗೆ ಮರೆಯಾಗುವದು ಶ್ರೇಯಸ್ಕರವೆಂತಲೂ ಫೈಜಿಯು ತನ್ನ ಮನಸ್ಸಿನಲ್ಲಿ ನಿರ್ಧಾರಮಾಡಿ ಅತ್ಯಂತ ದುಃಖದಿಂದ ಆಶ್ರಮವನ್ನು ಬಿಟ್ಟು ಹೋಗುವದಕ್ಕಾಗಿ ಆ ತಪಸ್ವಿಯ ನಿರೂಪವನ್ನು ತೆಗದುಕೊಂಡನು. ಫೈಜಿಯು ಮನುಷ್ಯನೇ ಇದ್ದನು. ಅವನ ಮೇಲೆ ಸುಶೀಲೆಯ ಪ್ರೇಮವು ಇದ್ದಂತೆ ಸುಶೀಲೆಯ ಮೇಲೆ ಅವನ ಪ್ರೇಮವು ಸಹ ಇತ್ತು. ಆದರೆ ಅವನ ಪ್ರೇಮವು ಅಕೃತ್ರಿಮವೂ ಪವಿತ್ರವೂ ಶುದ್ಧವೂ ಆಗಿತ್ತು. ಸುಶೀಲೆಯ ಮನಸ್ಸು ಮಹೇಶನಲ್ಲಿ ಸಂಪೂರ್ಣವಾಗಿ ನಟ್ಟುಹೋದ್ದರಿಂದ ಮಹೇಶನ ಪ್ರೇಮಲಾಭವು ಯಾವದಾದರೂ ಕಾರಣದಿಂದ ತಪ್ಪಿಹೋದಲ್ಲಿ ಅವಳು ತನ್ನ ಜೀವವನ್ನು ಸಹ ತ್ಯಾಗಮಾಡಲಿಕ್ಕೆ ಸಿದ್ಧಳಾಗಿದ್ದಳು. ಮಹೇಶನು ಹಿಂದೂಜಾತಿಯವನು ಇರದೆ, ಯವನನಿರುತ್ತಾನೆಂಬ ಸಂಗತಿಯು ಸುಶೀಲೆಗೆ ತಿಳಿದರೂ ಅವಳ ಪ್ರೇಮದಲ್ಲಿ ಕಿಂಚಿತ್ತಾದರೂ ಅಂತರ ಬರುವಂತೆ ಇದ್ದಿಲ್ಲವೆಂಬುವದು ಮಹೇಶನಿಗೆ ಪೂರ್ಣವಾಗಿ ಗೊತ್ತಿತ್ತು. ಈ ಪ್ರಕಾರ ಪರಿಸ್ಥಿತಿಯು ಇದ್ದಾಗ್ಯೂ ಆ ದೇವಕನ್ನಿಕೆಯನ್ನು ಭಗ್ನಹೃದಯಳಾಗಿ ಮಾಡುವದು ಎಷ್ಟು ಕಠೋರವಾದ ಕೆಲಸವು! ಆದರೆ ಆ ಕುಮಾರಿಗೆ ತಾನು ಪ್ರೇಮದಾನಮಾಡಿದರೆ ತನ್ನ ಗುರುವಿನ ಸಂಗಡ ಕೃತಘ್ನತನದಿಂದ ನಡೆದಂತಾಗುವದೆಂದು ತಿಳಿದು, ಫೈಜಿಯು ತನಗೆ ಎಷ್ಟು ತಳಮಳವಾದರೂ ಆ ಉಸಾಬರಿಗೆ ಹೋಗಲಿಲ್ಲ. ಇಷ್ಟು ಮಾಯಾಪಾಶವನ್ನೂ ಮೋಹವನ್ನೂ ಕೇವಲ ಕರ್ತವ್ಯದಗೋಸ್ಕರ ಕಾಲಿನಿಂದ ಒದೆಯುವದು ಸಾಮಾನ್ಯ ಧೈರ್ಯವಲ್ಲ! ಫೈಜಿಯಂತೆ ಪ್ರೇಮವನ್ನೂ ಸೌಖ್ಯವನ್ನೂ ಧಿಕ್ಕರಿಸಿ, ಕರ್ತವ್ಯಕ್ಕೆ ಸನ್ಮಾನವನ್ನೀಯುವಂಥ ಜಿತೇಂದ್ರಿಯ ನರವೀರರು ಈ ಜಗತ್ತಿನಲ್ಲಿ ದೊರಕುವದು ಅಪರೂಪವೇ ಸರಿ. ಇಂಥ ಸತ್ಪುರುಷರು ಯಾವತ್ಕಾಲದಲ್ಲೂ ಧನ್ಯರೇ!

ಫ್ರೈಜಿಯು ಇಷ್ಟೊಂದು ಸ್ವಾರ್ಥತ್ಯಾಗವನ್ನೂ ಮನೋನಿಗ್ರಹವನ್ನೂ ಮಾಡಿ, ಆ ತಪಸ್ವಿಯ ನಿರೂಪವನ್ನು ತೆಗೆದುಕೊಂಡದ್ದು ಮಾತ್ರ ನಿಜವು. ಆದರೆ ಅವನ ದುಷ್ಟ ಕಾಲುಗಳು ಆ ಸ್ಥಾನವನ್ನು ಬಿಟ್ಟು ಮೇಲಕ್ಕೇಳಲೊಲ್ಲವು. ಈ ಪ್ರಕಾರ ಅವನ ಮನಸ್ಸಿಗೂ ಕಾಲುಗಳಿಗೂ ಬಹಳೊತ್ತಿನಕ ಜಗಳವು ನಡೆದು, ಕಡೆಗೆ ಅವನ ಮನಸ್ಸು ಆ ನಿಷ್ಕಲಂಕ ಮತ್ತು ನಿರ್ದೋಷಿಯಾದ ಕುಮಾರಿಯ ಮುಖಾವಲೋಕನಮಾಡುವದಕ್ಕಾಗಿ ಪರ್ಣಕುಟಿಯ ಕಡೆಗೆ ಎಳೆಸಹತ್ತಿತು ಆಗ ಮಾತ್ರ ಫ್ರೈಜಿಗೆ ತಾನು ತಿಳಕೊಂಡಂಥ ಬಂಧುಭಗಿನೀ ಪ್ರೇಮವು ತನ್ನನ್ನು ವಂಚಿಸಿ ತನಗೆ ತಿಳಿಯಗೊಡದಂತೆ ರೂಪಾಂತರವಾಗಲಿಕ್ಕೆ ಹತ್ತಿರುತ್ತದೆಂಬುವದು ಚನ್ನಾಗಿ ತಿಳಿಯಿತು. ತನ್ನ ಪ್ರೇಮವು ಈ ಮೇರೆಗೆ ರೂಪಾಂತರವಾದದ್ದಕ್ಕೆ ಫ್ರೈಜಿಗೆ ದುಃಖವೆನಿಸಲಿಲ್ಲ. ಆದರೆ ತಾನು ಸುಶೀಲೆಯ ಕಡೇ ಬೆಟ್ಟೆಯನ್ನು ತೆಗೆದುಕೊಳ್ಳದೆ, ಪರ್ಣಕುಟಿಯನ್ನು ದಾಟಿ ಬಂದದ್ದು ದೊಡ್ಡ ತಪ್ಪಾಯಿತೆಂದು ಅವನಿಗೆ ಬಹಳ ದುಃಖವೆನಿಸಿತು. ಆದ್ದರಿಂದ ಮಹೇಶನು ಲೋಹಚುಂಬಕದಿಂದ ಎಳೆಯಲ್ಪಟ್ಟವನಂತೆ ಹಿಂದಕ್ಕೆ ತಿರುಗಿ, ಕಂಪಿತಹೃದಯನಾಗಿ, ಮುಂದ ಹೆಜ್ಜೆಗಳನ್ನಿಡುತ್ತ, ಸುಶೀಲೆಯು ಮಲಗಿಕೊಂಡಿದ್ದ ಗುಹೆಯೊಳಗೆ ಬಂದನು. ಆಗ ಮೇಲಿನ ಸಂಗತಿಗಳನ್ನೆಲ್ಲ ಅರಿಯದೆ ಇದ್ದ ಆ ಸುಶೀಲೆಯು ಶಾಂತ ಚಿತ್ತದಿಂದ ನಿದ್ರಾಸುಖವನ್ನನುಭವಿಸುತ್ತಿದ್ದಳು. ಸುಶೀಲೆಯ ಚಿಂತಾಶೂನ್ಯ--ವಿಶ್ವಾಸಪೂರ್ಣ--ಹಾಸ್ಯಯುಕ್ತ--ಸುಂದರ ಮುಖಕಮಲವನ್ನು ಆಕೆಯ ತಲೆಗಿಂಬಿನ ಕಡೆಗೆ ಮಿಣಿ ಮಿಣಿ ಉರಿಯುತಿದ್ದ ದೀಪದ ನಿಸ್ತೇಜ ಪ್ರಕಾಶದ ಸಹಾಯದಿಂದ ನೋಡಿದ ಕೂಡಲೆ ಅವನ ದುಃಖವು ಮಿತಿಮಿರಿತು. ಅವನು ಆಕೆಯನ್ನು ಎವೆಯಿಕ್ಕದೆ ಒಂದೇಸವನೆ ನೋಡುತ್ತ ನಿಂತುಕೊಂಡನು. ಪ್ರಭಾತಕಾಲದ ಮಲ್ಲಿಕಾಪುಷ್ಪಗಳಂತೆ ಶುಭ್ರವಾದ ವಸ್ತ್ರಗಳನ್ನು ಧರಿಸಿದ ಸುಶೀಲೆಯ ಸುವರ್ಣಕೇತಕಿಯಂಥ ಮನೋಹರವಾದ ಅಂಗಕಾಂತಿಯನ್ನೂ, ನಿದ್ರೆಯಿಂದ ಆಲಸ್ಯಪೂರ್ಣವಾದ ಆಕೆಯ ಪವಿತ್ರ ಮುಖದಿಂದ ಹೊರಡುವ ಮಂದಶ್ವಾಸವನ್ನೂ, ಆಕೆಯ ಮೋರೆಯ ಮೇಲೂ-ಕುತ್ತಿಗೆಯ ಮೇಲೂ-ವಕ್ಷಸ್ಥಲಗಳ ಮೇಲೂ ಅಸ್ತಾವ್ಯಸ್ತವಾಗಿ

ಬಿದ್ದ ಅತ್ಯಂತ ಕರ್ರಗಾದ ಉಂಗುರಗೂದಲುಗಳನ್ನೂ ನೋಡಿ ಫೈಜಿಯು ಮೈಮರೆತು ನಿಂತುಕೊಂಡನು. ಎಷ್ಟೋ ಹೊತ್ತಿನ ವರೆಗೆ ಅವನು ಆ ಕುಮಾರಿಯ ಸೌಂದರ್ಯವನ್ನು ನೋಡುತ್ತ ಕಲ್ಲುಗೊಂಬೆಯಂತೆ ತಟಸ್ಥನಾಗಿ ನಿಂತಲ್ಲೇ ನಿಂತುಕೊಂಡಿದ್ದನು. ಅವನು ಸ್ವಲ್ಪ ಹೊತ್ತಿನ ನಂತರ ಎಚ್ಚರಿಕೆಯ ಮೇಲೆ ಬಂದು, ತನ್ನಷ್ಟಕ್ಕೆ ಅಂದದ್ದೇನಂದರೆ:—"ಸುಶೀಲೇ! ನಾನು ಈಗ ನಿನ್ನ ಕಡೇ ಬೆಟ್ಟಿಯನ್ನು ತೆಗೆದುಕೊಳ್ಳಲಿಕ್ಕೆ ಬಂದಿರುತ್ತೇನೆ. ಅಯ್ಯೋ! ನಾನು ಯವನ ವಂಶದಲ್ಲಿ ಜನ್ಮವನ್ನು ತೆಗೆದುಕೊಂಡು ನಿನ್ನ ಪ್ರೇಮದಿಂದ ಅಂತರವಾಗಲಿಕ್ಕೆ ಹಿಂದಿನ ಜನ್ಮದಲ್ಲಿ ಎಂಥ ಕರ್ಮವನ್ನು ಮಾಡಿದ್ದೆನೋ ತಿಳಿಯದು! ಎಲೌ ದಯಾಘನವಾದ ಪ್ರಭುವೇ! ನಿನ್ನ ವಿರಾಟ ಸೃಷ್ಟಿಯಲ್ಲಿರುವ ಈ ಕ್ಷುದ್ರ ಪ್ರಾಣಿಯನ್ನು ಯಾಕೆ ಛಲಮಾಡುತ್ತೀ? ಈ ಬ್ರಾಹ್ಮಣ ಕನ್ನಿಕೆಯ ರೂಪ ಜ್ಯೋತಿಯಲ್ಲಿ ಯವನನಾದ ನನ್ನನ್ನು ಪತಂಗದಂತೆ ಯಾಕೆ ಸುಡುತ್ತೀ? ನಿನ್ನದಾದರೂ ಏನು ಅಪರಾಧವು? ನನ್ನ ಪೂರ್ವಜನ್ಮದ ಪಾಪವೇ ಈ ಪ್ರಸಂಗದಲ್ಲಿ ನನಗೆ ಅಡ್ಡ ಬರುತ್ತಿರಬಹುದು! ಎಂದೂ ಪ್ರಾಪ್ತವಾಗದಂಥವಳ ಆಶೆಯನ್ನು ಮೂಢನಾದ ನಾನು ಯಾಕೆ ಮಾಡಿದೆನು? ಮನಸ್ಸಿನಲ್ಲಿ ವಿಚಾರಮಾಡುವದು ಸಹ ಭಯಂಕರವಾದ ಪಾಪವೆನಿಸುವ ವಿಷಯದಲ್ಲಿ ನಾನು ಅಭಿಲಾಷೆಯನ್ನು ಯಾಕೆ ಮಾಡಿದೆನು? ನಿಶ್ಚಯವಾಗಿಯೂ ನಾನು ಮಹಾ ಮೂಢನಿರುತ್ತೇನೆ. ಸುಶೀಲೇ! ಸುಶೀಲೇ! ಇನ್ನು ಮೇಲೆ ನಾನು ಈ ನನ್ನ ಕೃಷ್ಣಮುಖವನ್ನು ನಿನ್ನ ದೃಷ್ಟಿಗೆ ಬೀಳಗೊಡಲಾರೆನು. ಆದರೆ ನಾನು ಹೋದಲ್ಲೆಲ್ಲ ನಿನ್ನ ಸುಂದರ ಮುಖವನ್ನೂ, ನಿನ್ನ ಅಂತಃಕರಣದ ನಿಷ್ಕಲಂಕ ಸರಳ ಪ್ರೇಮವನ್ನೂ, ನಿನ್ನ ಮನಸ್ಸಿನ ಉದಾರತನವನ್ನೂ ಸ್ಮರಣಮಾಡುತ್ತ ನಿನ್ನ ಧ್ಯಾನದಲ್ಲಿಯೇ ನನ್ನ ಆಯುಷ್ಯವನ್ನು ಕಳೆಯುವೆನು. ನೀನು ನನ್ನ ಪರಮಪೂಜ್ಯ ಆರಾಧ್ಯ ದೇವತೆಯು. ಎಲೈ ದೇವೀ! ನಾನು ನಿನಗೆ ಅನನ್ಯಭಾವದಿಂದ ಪ್ರಣಿಪಾತಮಾಡಿ ನಿನ್ನ ನಿರೂಪವನ್ನು ತೆಗೆದುಕೊಳ್ಳುತ್ತೇನೆ. ಈಶ್ವರನು ನಿನಗೆ ಯಾವಾಗಲು ಸುಖದಿಂದಿಡಲಿ!"

ಈ ಪ್ರಕಾರ ಫೈಜಿಯು ತನ್ನಿಷ್ಟಕ್ಕೆ ಅಂದವನೇ ತಾನು ಬರೆದು ತಂದಿದ್ದ ಪತ್ರವನ್ನು ಆಕೆಯ ಹಾಸಿಗೆಯ ಮೇಲಿಟ್ಟು ಪುನಃ ಸುಶೀಲೆಯ ಪ್ರೇಮಪೂರ್ಣ ಮುಖವನ್ನು ಕಣ್ಣು ತುಂಬ ನೋಡಿ ಹೊರಟು ಹೋದನು.

## ಭಾಗ ೪.

## ಮಹೇಶನ ಪತ್ರವು.

ಹೊರಗೆ ಸ್ವಚ್ಛವಾಗಿ ಬೆಳಕು ಹರಿಯಿತು. ಮಹೇಶನ ವಿಯೋಗದಿಂದ ಭ್ರಮಿಷ್ಟನಂತೆ ಆಗಿದ್ದ ತಪಸ್ವಿಯು ಸುಶೀಲೆಯು ಮಲಗಿದ ಸ್ಥಳಕ್ಕೆ ಬಂದನು. ಅವಳು ಇನ್ನೂ ಗೊರ್‍ರೆಂದು ನಿದ್ರೆಮಾಡುತ್ತಿದ್ದಳು. ಆ ಬಾಲಿಕೆಯ ನಿರ್ದೋಷ ನಿದ್ರೆಯನ್ನೂ, ಚಿಂತಾಶೂನ್ಯ ಮುಖವನ್ನೂ ನೋಡಿ, ತಪಸ್ವಿಯು ನಿಟ್ಟುಸುರು ಬಿಟ್ಟು ಅಂದದ್ದೇನಂದರೆ: - "ನಾನು ಸಂಸಾರ ಮುಕ್ತನಿದ್ದರೂ ಈ ತಾಪವನ್ನು ಯಾಕೆ ಹಚ್ಚಿಕೊಂಡೆನು! ಈ ಹುಡುಗಿಯನ್ನು ನಾನು ಹೊಟ್ಟೆಯ ಮಗಳಂತೆ ಪಾಲನಪೋಷಣಮಾಡಿದೆನು. ಈ ಹುಡಿಗಿಯ ಕೂಡ ನನ್ನ ನಿಜವಾದ ಸಂಬಂಧವೇನಿರುತ್ತದೆಂಬುವದು ಸ್ವತಃ ಈಕೆಗೂ ಗೊತ್ತಿಲ್ಲ. ಈಕೆಯು ಇನ್ನೂ ಆರು ತಿಂಗಳ ಕೂಸು ಇದ್ದಾಗಿನಿಂದ ನಾನು ಈಕೆಯನ್ನು ಈ ಆಶ್ರಮದಲ್ಲಿ ಬೆಳಿಸಿದೆನು. ಹಾಗೂ ಮಹೇಶನ ಸಂಬಂಧವಾದರೂ ನನಗೇನು? ಅವನ ಕೇವಲ ಬ್ರಹ್ಮಚರ್ಯದ ತೇಜಸ್ಸುಳ್ಳ ಮುದ್ರೆಯನ್ನೂ ಅವನ ಅಧ್ಯಯನದ ಉತ್ಕಂಠತೆಯನ್ನೂ ನೋಡಿ ಅವನನ್ನು ಅನಾಥ ಬ್ರಾಹ್ಮಣಪುತ್ರನೆಂದು ತಿಳಿದು ಒಮ್ಮೆಲೆ ಅವನ ಮೇಲೆ ಮೋಹಪಟ್ಟೆನು. ನಾನು ಇಷ್ಟು ದಿವಸ ಅವನನ್ನು ನನ್ನ ಜೀವದಕಿಂತಲು ಹೆಚ್ಚು ತಿಳಿದುಕೊಂಡು ಅವನಿಗೆ ಸಕಲ ಶಾಸ್ತ್ರಗಳ ಅಭ್ಯಾಸಮಾಡಿಸಿದೆನು. ಕಡೆಗೆ ಅವನು ನನ್ನ ಸ್ವಪ್ನ ಸುಖವನ್ನು ಭಂಗಪಡಿಸಿ ಹೊರಟು ಹೋದನು. ನಾನು ಅವನನ್ನು ನನ್ನ ಆಶ್ರಮ ಬಿಟ್ಟು ಕಳಿಸಿದರೂ ಅವನ ಸ್ಮರಣವು ನನ್ನೀ ದೇಹವಿರುವ ವರೆಗೆ ಹೋಗಲರಿಯದು. ಅವನು ಎಷ್ಟು ಸಚ್ಛೀಲ-ಪವಿತ್ರಾಚರಣೆಯಾದ ಸಾಧು ಪುರುಷನು! ಆದರೆ ಕರ್ಮಗತಿಯು ಎಷ್ಟು

ವಿಚಿತ್ರವಾದದ್ದು! ಇಂಥ ಸದ್ಗುಣಿಯಾದ ಸಾಧು ಕುಮಾರನು 'ಇವಳ ಮೇಲೆ ಅನುರಕ್ತನಾದನು ನಾನು ಅವನನ್ನು ಬ್ರಾಹ್ಮಣಪುತ್ರನೆಂದು ತಿಳಿದಿದ್ದೆನು. ಮತ್ತು ಇವಳಿಗಾದರೂ ತಾನು ಕ್ಷತ್ರಿಯ ಕನ್ಯೆಯೆಂಬುವದು ಎಲ್ಲಿ ಗೊತ್ತಿರುವದು? ಮಹೇಶನಂತೂ ಹೊರಟುಹೋದನು. ಇನ್ನು ಮೇಲೆ ಈ ಕುಮಾರಿಯನ್ನು ಇಲ್ಲಿ ಇಡುವದು ಸರಿಯಲ್ಲ. ನಾನು ಈ ಹರಿದ್ವಾರದಲ್ಲಿ ಕೆಲವು ಕಾಲದ ಪರಿಯಂತರ ಇರಬೇಕೆಂದು ಅಪೇಕ್ಷಿಸಿ ಬಂದಿದ್ದೆನು. ಆದರೆ ಇನ್ನು ಮುಂದೆ ಇಲ್ಲಿ ಹೆಚ್ಚಿಗೆ ಇರುವದು ಒಳ್ಳೇ ದಲ್ಲ ನಾನು ನಾಳೆ ತೀರ್ಥಯಾತ್ರೆಯ ನಿಮಿತ್ಯವಾಗಿ ಹೊರಟು ಇವಳನ್ನು ಎಲ್ಲಿಯಾದರೊಂದು ನಿರ್ಭಯ ಸ್ಥಳದಲ್ಲಿಟ್ಟು ಬಂದರೆ ನನ್ನ ಮನಸ್ಸಿನ ದುಗಡು ಸ್ವಲ್ಪಾದರೂ ಕಡಿಮೆಯಾದೀತು."

ಈ ಪ್ರಕಾರ ಇನ್ನೂ ಹಲವು ವಿಷಯಗಳನ್ನು ಆ ತಪಸ್ವಿಯು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಸ್ನಾನಕ್ಕೋಸ್ಕರ ನದಿಯ ತೀರಕ್ಕೆ ಹೋದನು.

ಸುಶೀಲೆಯೂ ಮಹೇಶನೂ ಆಶ್ರಮದ ಬದಿಯಲ್ಲಿರುವ ಎರಡು ಬೇರೆ ಬೇರೆ ಗುಹೆಗಳಲ್ಲಿ ಮಲಗಿಕೊಳ್ಳುತ್ತಿದ್ದರು. ಹಿಂದಿನ ದಿವಸ ಮಹೇಶನು ಗಂಗಾತೀರದ ಮೇಲೆ ತನ್ನ ಹೇಳಿಕೆಯಂತೆ ಆಣೆಯನ್ನು ಮಾಡಲಿಕ್ಕೆ ಒಡಂಬಟ್ಟದ್ದರಿಂದ ಸುಶೀಲೆಯು ನಿಶ್ಚಿಂತಳಾಗಿ ತನ್ನ ಗುಹೆಯಲ್ಲಿ ಈ ಹೊತ್ತು ನಿದ್ರೆ ಮಾಡಿದ್ದಳು. ದಿನಾಲು ಬೆಳಿಗ್ಗೆ ಮಹೇಶನು ಮೊದಲೇ ಎದ್ದು ಸುಶೀಲೆಯ ಗುಹೆಯ ಸಮೀಪದಲ್ಲಿ ನಿಂತುಕೊಂಡು—"ಸುಶೀಲೇ! ಏಳು" ಎಂದು ಅಂದ ತರುವಾಯ ಸುಶೀಲೆಯು ಎದ್ದು ಹೊರಗೆ ಬರುತ್ತಿದ್ದಳು. ಆದರೆ ಈ ಹೊತ್ತು ಎಷ್ಟು ತಡವಾದರೂ ನಿತ್ಯಕ್ರಮದಂತೆ ಮಹೇಶನ ಸುಳವೇ ಇದ್ದಿಲ್ಲ! ಯಾರೂ ಸುಶೀಲೆಯನ್ನು ಒದರಲಿಲ್ಲ. ಆದ್ದರಿಂದ ಸುಶೀಲೆಯು ತಾನಾಗಿ ಎಚ್ಚತ್ತು ಚಂಚಲ ಮನೋವೃತ್ತಿಯಿಂದಲೂ, ಗಾಬರಿಯಾದ ಮುಖಮುದ್ರೆಯಿಂದಲೂ ಹಾಸಿಗೆಯ ಮೇಲೆ ಎದ್ದು ಕುಳಿತಳು. ಆಗ ಹೊರಗೆ ಬಿಸಿಲು ಏರಿತ್ತು. ತಪಸ್ವಿಯ ಪೂಜೆಯ ಹೊತ್ತು ಸಹ ಮೀರಿತ್ತು. ಆದ್ದರಿಂದ ಸುಶೀಲೆಯು ಸ್ನಾನಾದಿ ಪ್ರಾತರ್ವಿಧಿಗಳನ್ನು ಬೇಗನೆ ಮುಗಿಸಿಕೊಳ್ಳಬೇಕೆಂದು ಚಡಪಡಿಸಿ ಎದ್ದಳು ಈಗೀಗ ಎದ್ದು ಹೊರಗೆ ಹೋಗಲಿಕ್ಕೆ

ಅವಳು ಸಿದ್ಧಳಾಗಿರಲು ತನ್ನ ಹಾಸಿಗೆಯ ಬದಿಯಲ್ಲಿ ಒಂದು ಪತ್ರವು ಬಿದ್ದದ್ದನ್ನು ಕಂಡಳು. ಆ ಪತ್ರವು ಏನಿರಬಹುದೆಂದು ಅವಳು ಅದನ್ನು ಕೈಯಲ್ಲಿ ತೆಗೆದುಕೊಂಡು ನೋಡಲಾಗಿ ಅದು ತನ್ನನ್ನುದ್ದೇಶಿಸಿ ಬರೆದದ್ದೆಂದು ಅವಳಿಗೆ ಗೊತ್ತಾಯಿತು. ಕೂಡಲೇ ಆಕೆಯ ಮಸ್ತಕವು ಭ್ರಮಿಸಹತ್ತಿತು. ಆಕೆಗೆ ಮೂರ್ಛೆಯೂ ಸಹ ಬಂತು. ಆದ್ದರಿಂದ ಅವಳು ಪುನಃ ಕೆಳಗೆ ಕುಳಿತು ಸ್ವಲ್ಪ ಹೊತ್ತಿನ ತರುವಾಯ ಕಿಂಚಿತ್ತು ಸಮಾಧಾನವನ್ನು ಹೊಂದಿ ಹಾಗೂ ಹೀಗೂ ಧೈರ್ಯಮಾಡಿ ಆ ಪತ್ರವನ್ನು ಓದಲಾರಂಭಿಸಿದಳು. ಆ ಪತ್ರದಲ್ಲಿ ತನ್ನ ಹೃದಯಸ್ವಾಮಿಯೂ, ಜೀವನಸೂರ್ಯನೂ ಆದ ಮಹೇಶನು ತನ್ನನ್ನು ಅಗಲಿ ಹೋದನೆಂಬ ಸಂಗತಿಯನ್ನು ಓದಿದ ಕೂಡಲೆ ಅವಳ ಕಣ್ಣುಗಳು ಅನಿವಾರವಾದ ಅಶ್ರುಪ್ರವಾಹದಿಂದ ತುಂಬಿ ಹೋದವು. ಅವಳ ಕಣ್ಣಿಗೆ ಕತ್ತಲುಗೂಡಿಸಿದಂತಾಯಿತು. ತರುವಾಯ ಅವಳು ಬಿಕ್ಕಿಬಿಕ್ಕಿ ಅತ್ತು ತನ್ನ ಮನಸ್ಸಿನಲ್ಲಿ ಉಕ್ಕಿ ಬಂದ ದುಃಖವನ್ನು ಸ್ವಲ್ಪ ಹೊತ್ತು ಕಳೆದುಕೊಂಡು ಅದು ಸ್ವಲ್ಪ ಕಡಿಮೆಯಾದ ತರುವಾಯ ತಿರುಗಿ ಆ ಪತ್ರದ ಕಡೆಗೆ ನೋಡಿ ಅದನ್ನು ಓದಲಿಕ್ಕೆ ಯತ್ನಿಸಿದಳು. ಈ ಮೇರೆಗೆ ಆ ಪತ್ರದೊಳಗಿನ ನಾಲ್ಕಾರು ಸಾಲುಗಳನ್ನು ಓದುವಷ್ಟರಲ್ಲಿ ಪುನಃ ಅವಳ ಶೋಕವು ಹೆಚ್ಚಾಗಲು ಅವಳು ಎಡೆಬಿಡದೆ ಕಣ್ಣೀರು ಸುರಿಸಿ ದೊಡ್ಡ ಧ್ವನಿ ತೆಗೆದು ಅಳತೊಡಗಿದಳು. ಸ್ವಲ್ಪ ಹೊತ್ತು ಅಳುವಳು, ಸ್ವಲ್ಪ ಹೊತ್ತು ದುಃಖವನ್ನು ನುಂಗಿಕೊಂಡು ಪತ್ರವನ್ನು ಓದುವಳು. ಈ ಪ್ರಕಾರ ಒಂದೇ ಕಾಲಕ್ಕೆ ಎರಡೂ ಕೆಲಸಗಳು ನಡೆದವು. ಆದರೆ ಆಕೆಗೆ ಆ ಪತ್ರವನ್ನು ಒಂದೇ ಸವನೆ ಪೂರ್ಣವಾಗಿ ಓದುವದಾಗಲಿಲ್ಲ. ಮಹೇಶನು ಆ ಪತ್ರದಲ್ಲಿ ಬರೆದದ್ದೇನಂದರೆ:—

"ಪ್ರಿಯ ಸುಶೀಲೇ! ಅಶ್ರಮದಿಂದ ಹೊರಟುಬರುವ ಮುಂಚೆ ನಿನಗೆ ಪ್ರತ್ಯಕ್ಷವಾಗಿ ಬೆಟ್ಟಿಯಾಗಿ ನಿನ್ನ ಬಾಯಿಂದ ಹೊರಡುವ ಸ್ನೇಹಪೂರ್ಣವಾದ ಮಧುರ ಶಬ್ದಗಳನ್ನು ಕೇಳುವದು ಈ ಅಧಮನ ಹಣೆಬರಹದಲ್ಲಿ ಬರೆದಿಲ್ಲ! ಈಹೊತ್ತು ನಾನು ನಿನಗೆ ತಿಳಿಯದಂತೆ ನಿನ್ನನ್ನು ಮೋಸಪಡಿಸಿಯೂ ನಿನ್ನ ವಿಶ್ವಾಸಘಾತಮಾಡಿಯೂ ನನ್ನ ಕೃಷ್ಣಮುಖವನ್ನು ನಿನ್ನಿಂದ

ಮಾರವಾಡುತ್ತಲಿದ್ದೇನೆ. ಈ ಜನ್ಮದಲ್ಲಂತೂ ನನ್ನದೂ ನಿನ್ನದೂ ಬೆಟ್ಟಿಯಾಗಲಾರದು! ನಾಳೆ ಬೆಳಗಾದ ತರುವಾಯ ಈ ಪತ್ರವನ್ನು ಓದಿಯೂ ಪೂಜ್ಯನಾದ ಪಿತನ ಬಾಯಿಂದ ಕೇಳಿಯೂ ನಿನಗೆ ನನ್ನ ನಡತೆಯ ಬಗ್ಗೆ ಪರಮಾವಧಿ ದುಃಖವುಂಟಾಗುವದು. ನೀನು ನನ್ನನ್ನು ನಿರ್ದಯಿಯೆಂದು ಹಳಿಯುವಿ. ನಿನಗೆ ಪ್ರೀತಿವಿಶ್ವಾಸಗಳನ್ನು ತೋರಿಸಿ ನಾನು ಮೋಸಪಡಿಸಿದ್ದಕ್ಕಾಗಿ ನೀನು ಅತ್ಯಂತವಾಗಿ ನೊಂದುಕೊಳ್ಳುವಿ. ಇದೆಲ್ಲ ನನಗೆ ತಿಳಿಯುತ್ತದೆ. ಆದರೆ ಮಾಡಲೇನು? ಪರಮೇಶ್ವರನ ಮನಸ್ಸಿನಲ್ಲಿ ನಿನಗೂ ನನಗೂ ದುಃಖದಲ್ಲಿ ಮುಳುಗಿಸುವದೇ ಇದ್ದಲ್ಲಿ ನಮ್ಮ ಯತ್ನವೇನದೆ? ನಿನ್ನ ಮೇಲೆ ನನ್ನ ನಿಸ್ಸೀಮ ಪ್ರೇಮವು ಎಷ್ಟಿರುತ್ತದೆಂಬದರ ಕಲ್ಪನೆಯು ನಿನಗೆ ಸರಿಯಾಗಿ ಇರದಿದ್ದರೂ ಆ ಸರ್ವಾಂತರ್ಯಾಮಿ ಪ್ರಭುವಿಗೆ ಪೂರ್ಣವಾಗಿ ಗೊತ್ತುಂಟು. ನಿನ್ನ ಮೇಲೆ ನನ್ನ ನಿಸ್ಸೀಮ ಪ್ರೇಮವು ಇರುವ ಕಾರಣದಿಂದಲೇ ನನಗೆ ಈ ಮಾರ್ಗವನ್ನು ಸ್ವೀಕರಿಸಬೇಕಾಗಿರುತ್ತದೆ. ಸುಶೀಲೇ! ನೀನು ನಿರ್ದೋಷಿಯಾದ ಪವಿತ್ರ ಬಾಲಿಕೆಯು ಇರುತ್ತೀ. ನಿನಗೆ ಜಗತ್ತಿನ ಅನುಭವವು ಇನ್ನೂ ಚನ್ನಾಗಿ ಇಲ್ಲ. ನಿನ್ನ ಪ್ರೇಮಕ್ಕೆ ಪಾತ್ರವಾಗಲು ನನ್ನ ಜಾತಿಯೂ ಧರ್ಮವೂ ಅಡ್ಡಬರುತ್ತವೆಂದು ನಿನಗೆ ತಿಳಿದ ನಂತರ ಸಹ ನೀನು ನನ್ನಿಂದ ನಿನ್ನ ಪ್ರೇಮೌಘವನ್ನು ಎಂದೂ ತಿರುಗಿಸಲಿಕ್ಕಿಲ್ಲವೆಂದು ನನಗೆ ಪೂರ್ಣ ವಿಶ್ವಾಸವುಂಟು. ಅಂತೇ ನಾನು ಈಹೊತ್ತು ನಿನಗೆ ತಿಳಿಯದಂತೆ ಹೊರಟುಹೋಗುತ್ತೇನೆ.

"ಇಷ್ಟು ದಿವಸ ನಿನ್ನಿಂದ ಬಚ್ಚಿಟ್ಟದ್ದ ಸಂಗತಿಯನ್ನು ಈಹೊತ್ತು ನಿನಗೆ ತಿಳಿಸುವ ಪ್ರಸಂಗವು ಬಂದಿರುತ್ತದೆ. ನಾನು ಬ್ರಾಹ್ಮಣಪುತ್ರನಲ್ಲ, ಹಿಂದೂ ಸಹ ಅಲ್ಲ; ನಾನು ಮುಸಲ್ಮಾನನಿದ್ದೇನೆ. ನೀನು ಬ್ರಾಹ್ಮಣ ಕನ್ನಿಕೆಯು ಇರುತ್ತೀ ನಿನ್ನ ಕೂಡ ನನ್ನ ವಿವಾಹವಾಗುವದು ಈ ಜನ್ಮದಲ್ಲಂತೂ ಅಸಾಧ್ಯವೇ. ನಾನು ಬ್ರಹ್ಮಚಾರಿವೇಷದಿಂದ ನಿನ್ನ ಪೂಜ್ಯನಾದ ಪಿತನಲ್ಲಿ ಸಂಸ್ಕೃತ ಅಧ್ಯಯನವನ್ನು ಮಾಡುವದಕ್ಕೋಸ್ಕರ ದಿಲ್ಲಿಯ ಸಾರ್ವಭೌಮನಾದ ಅಕಬರ ಬಾದಶಹನ ಆಜ್ಞೆಗನುಸರಿಸಿ ಬಂದಿದ್ದೆನು. ನಾನು ಅಕಬರ ಬಾದಶಹನ ವಿಶ್ವಾಸಪೂರ್ಣನೂ ಪ್ರಿಯ ಮಿತ್ರನೂ ಆದ

ಥೈಜೆಯು. ನಾನು ಇಷ್ಟು ದಿವಸ ಮಹೇಶನೆಂಬ ಹೆಸರನ್ನು ಇಟ್ಟುಕೊಂಡು ನಿನ್ನ ಹತ್ತರ ಇದ್ದೆನು. ಸುಶೀಲೇ, ಇಂಥ ಕಪಟಾಚರಣ ಮಾಡುವದು ಮಹತ್ಪಾಪವೆಂಬುವದನ್ನು ನಾನು ಬಲ್ಲೆನು. ಆದರೆ ನಾನು ಬಾದಶಹ ನಿಗೆ ವಚನಕೊಟ್ಟದ್ದರಿಂದ ಆ ವಚನಕ್ಕೆ ವಿರೋಧವಾಗಿ ನಡೆಯಬಾರದೆಂದು ರಾತ್ರಿಹಗಲು ಇಷ್ಟೊಂದು ಕಷ್ಟವನ್ನೂ ವಿಪತ್ತಿಯನ್ನೂ ಅನುಭೋಗಿಸಿದೆನು. ದೊಡ್ಡ ಅಮೀರರ ಮನೆತನದಲ್ಲಿ ನಾನು ಜನ್ಮಹೊಂದಿರುವೆನು. ಪರಮೇಶ್ವ ರನ ಆಶೀರ್ವಾದದಿಂದಲೂ ಅಕಬರ ಬಾದಶಹನ ಕೃಪೆಯಿಂದಲೂ ನನಗೆ ಅಖಿಲ ಐಶ್ವರ್ಯವು ಪ್ರಾಪ್ತವಾಗಿರುತ್ತದೆ. ಆದರೂ ಬಾದಶಹನ ಇಚ್ಛಾನುಸಾರವಾಗಿ ಈ ದೇಶಕಾರ್ಯವನ್ನು ಕೈಕೊಂಡು ಬ್ರಹ್ಮಚರ್ಯ ವ್ರತವನ್ನು ಸ್ವೀಕರಿಸಿ, ಉಟ್ಟದ್ದೊಂದೇ ಬಟ್ಟೆಯ ಮೇಲೆ ಇಷ್ಟು ದಿವಸಗಳನ್ನು ಕಳೆದೆನು.

“ಸುಶೀಲೇ, ಅಪವಿತ್ರ ಕಾಷ್ಠಗಳು ಸಹ ಅಗ್ನಿಸ್ಪರ್ಶದಿಂದ ರಕ್ತವರ್ಣ ವನ್ನು ಸ್ವೀಕರಿಸಿ ಅಗ್ನಿರೂಪದಿಂದ ಶುದ್ಧವಾಗುತ್ತವೆ. ಅಂದಮೇಲೆ ನಾನು ಮ್ಲೇಂಛನಿದ್ದರೂ ನಿನ್ನ ಪರಮ ಪೂಜ್ಯ ಪಿತನ ಪವಿತ್ರವಾದ ಸಹವಾಸದಿಂದ ಯಾಕೆ ಶುದ್ಧನಾಗಲಾರೆನು? ಆದ್ದರಿಂದ ನೀನು ಮನಸ್ಸಿನಲ್ಲಿ ಏನೂ ವಿಕಲ್ಪ ವನ್ನು ತಾರದೆ, ನನ್ನನ್ನು ಮ್ಲೇಂಛನೆಂದು ತಿಳಿದು ಹಳಿಯದೆ, ಹಿಂದೂ ಎಂದು ತಿಳಿದುಕೊಂಡು, ನನ್ನ ಮೇಲೆ ಇಷ್ಟು ದಿವಸಗಳ ಪರಿಯಂತರ ಪ್ರೇಮ ಮಾಡಿದಂತೆ ಇನ್ನು ಮುಂದೆ ಸಹ ಮಾಡುತ್ತಿರು. ನಾನು ಯವನನೆಂದು ತಿಳಿದ ಕೂಡಲೆ ನನ್ನ ಮೇಲಿನ ನಿನ್ನ ಪ್ರೇಮವನ್ನು ಕಡಿಮೆಮಾಡಬೇಡ. ಇದಲ್ಲದೆ ನಾನು ತಿಳಿದೂ ತಿಳಿದೂ ನಿಮ್ಮ ಸಮಾಜಧರ್ಮಕ್ಕಾಗಲಿ, ರೀತಿ ನಡಾವಳಿಗಾಗಲಿ, ಎಂದಿಗೂ ವ್ಯತ್ಯಯ ತರುವಂತೆ ನಡೆಯಲಿಲ್ಲೆಂಬುವದು ನಿನಗೆ ಗೊತ್ತೇ ಅದೆ. ನಾನು ನನ್ನ ಊಟವನ್ನು ನಿಮ್ಮಿಂದ ಬೇರೆಮಾ ಡುತ್ತ ಬೇರೆ ಕಡೆಗೆ ಹೋಗಿ ಮಲಗುತ್ತಿದ್ದೆನು ಈ ಹೊತ್ತಿನ ವರೆಗೆ ನಿಮ್ಮ ದೊಂದೂ ಪವಿತ್ರವಾದ ಒಡವೆಯನ್ನು ನಾನು ಮುಟ್ಟಲಿಲ್ಲ. ನಿನ್ನ ಸಂಗಡ ನಾನು ಯಾವಾಗಲೂ ತಿರುಗುತ್ತಿದ್ದೆನು. ನಿನ್ನ ಮನೋಹರ ಮುಖದಿಂದ ಹೊರಬೀಳುವ ಮಧುರ ಭಾಷಣಗಳನ್ನು ಕೇಳುತ್ತಿದ್ದೆನು. ನಿನ್ನ ಪ್ರೇಮಲ

ಸ್ವಭಾವದಿಂದಲೂ ಸರಲವರ್ತನದಿಂದಲೂ ನಾನು ಯಾವಾಗಲು ಮೋಹಿತನಾಗಿರುತ್ತಿದ್ದೆನು. ನಿನ್ನ ಸುಂದರವಾದ ಮುಖಕಮಲವನ್ನು ನೋಡುವದರಿಂದಲೂ, ಶರತ್ಕಾಲದಲ್ಲಿಯ ಪೌರ್ಣಮೆಯ ಚಂದ್ರಪ್ರಕಾಶದಂತೆ ನಿನ್ನ ಮಧುರವಾದ ತುಟಿಗಳ ಮೇಲೆ ವಿರಾಜಮಾನವಾಗುವ ನಗೆಯ ಸೊಬಗನ್ನು ನೋಡುವದರಿಂದಲೂ ನಾನು ಯಾವಾಗಲು ಧನ್ಯತೆಯನ್ನು ತಿಳಕೊಳ್ಳುತ್ತಿದ್ದೆನು. ಇಷ್ಟಾದರೂ ನಾನು ನಿಮ್ಮ ಅನ್ನನೀರುಗಳನ್ನಾಗಲಿ, ಅರಿವೆಅಂಚಡಿಗಳನ್ನಾಗಲಿ, ಅಪ್ರತ್ಯಕ್ಷವಾಗಿ ಸಹ ಎಂದೂ ಮುಟ್ಟಲಿಲ್ಲ. ನಾನು ಅನ್ಯ ಜಾತಿಯವನೆಂಬದಾಗಿ ನಿಮ್ಮ ಲಕ್ಷ್ಯದಲ್ಲಿ ಬರಬಾರದೆಂದು ನನ್ನ ಪ್ರತಿಯೊಂದು ಕೆಲಸವನ್ನು ಯುಕ್ತಿಯಿಂದ ಮಾಡುತ್ತ ಬಂದೆನು. ನಿಮ್ಮ ಆಶ್ರಮದೊಳಗಿನ ಒಂದೂ ಪದಾರ್ಥವು ಈ ಯವನನ ಸ್ಪರ್ಶದಿಂದ ಭ್ರಷ್ಟವಾಗಿಲ್ಲವೆಂದು ನಾನು ನಿಶ್ಚಯಪೂರ್ವಕವಾಗಿ ಹೇಳುತ್ತೇನೆ"

"ಸುಶೀಲೇ, ಇಷ್ಟಾದರೂ ಒಂದುವೇಳೆ ನನಗೆ ತಿಳಿಯದಂತೆ ಈ ಅಪವಿತ್ರ ಯವನನ ಸ್ಪರ್ಶವು ಆಗಿದ್ದರೆ, ಅದರಿಂದ ನೀವು ವ್ಯಸನಪಡುವ ಕಾರಣವಿಲ್ಲ. ಯಾಕಂದರೆ ಈ ಜಗತ್ತಿನಲ್ಲಿ ಜನರಿಗೆ ಪದೇ ಪದೇ ಅನೇಕ ಅಪವಿತ್ರ ಪದಾರ್ಥಗಳ ಸ್ಪರ್ಶ ಮಾಡುವ ಪ್ರಸಂಗವು ಬರುತ್ತದೆ. ಹೀಗಿದ್ದರೂ ಯಾರೂ ಎಂದೂ ಭ್ರಷ್ಟವಾಗಿಲ್ಲ. ಅಂದಮೇಲೆ ಮನುಷ್ಯದೇಹಧಾರಿಯಾದ ಯವನನ ಸ್ಪರ್ಶದಿಂದ ಯಾರೂ ಭ್ರಷ್ಟರಾಗಲಾರರು. ಶ್ರೇಷ್ಠವಾದ ಅಂತಃಕರಣವಿದ್ದವರು, ಅವರು ಯಾವ ಜಾತಿಯವರಿದ್ದರೂ - ಪರಮೇಶ್ವರನಿಗೆ ಪ್ರಿಯರಿರುವರು. ಆದ್ದರಿಂದ ಯವನನಾದ ನಾನು ನಿಮ್ಮ ಆಶ್ರಮದಲ್ಲಿದ್ದದ್ದಕ್ಕಾಗಿ ನಿನ್ನ ಮನಸ್ಸಿನಲ್ಲಿ ಯತ್ಕಿಂಚಿತ್ತಾದರೂ ಹಳಹಳಿಸಬೇಡ. ಈಶ್ವರದತ್ತ ಉದಾತ್ತಮನೋವೃತ್ತಿಯು ಒಂದು ವಿಶಿಷ್ಟ ಜಾತಿಯವರ ಇಲ್ಲವೆ ಧರ್ಮದವರ ಪಿತ್ರಾರ್ಜಿತ ಅಥವಾ ಸ್ವಸಂಪಾದಿತ ಒಡವೆಯಲ್ಲ. ಅದು ಈಶ್ವರದತ್ತ ಕಾಣಿಕೆಯು. ಅದು ಎಲ್ಲ ಮಾನವೀ ಪ್ರಾಣಿಗಳಿಗೆ ಸಮನಾಗಿ ಕೊಡಲ್ಪಟ್ಟಿರುತ್ತದೆ. ಆದ್ದರಿಂದ ನಾನು ಪರಧರ್ಮಿಯನೆಂದು ಅನಾದರಮಾಡಬೇಡ. ಪ್ರೇಮಕ್ಕೆ ಧರ್ಮವೂ ಇಲ್ಲ, ಜಾತಿಯೂ ಇಲ್ಲ. ಪ್ರೇಮವು ಸಮಾಜದ ನಿರ್ಬಂಧನಗಳನ್ನು ಲಕ್ಷಿಸುವ

ದಿಲ್ಲ. ಪ್ರೇಮಕ್ಕೆ ಯಾರ ಹೆದರಿಕೆಯೂ ಇಲ್ಲ. ಪ್ರೇಮವು ಕಣ್ಣಿಲ್ಲದ ಕುರುಡನಂತೆ ಇರುತ್ತದೆ. ನೀನು ನನ್ನ ಮೇಲೆ ಪ್ರೇಮಮಾಡಿದ್ದರಿಂದ ನಾನು ನಿನ್ನ ಮೇಲೆ ಮೋಹಿತನಾದೆನು. ಎಷ್ಟು ಪ್ರಯತ್ನಮಾಡಿದರೂ ನಿನ್ನ ಪವಿತ್ರ—ಅಕೃತ್ರಿಮ ಪ್ರೇಮವನ್ನು ಮರೆಯುವದು ನನ್ನಿಂದ ಅಸಾಧ್ಯವು. ಈ ಪ್ರೇಮವನ್ನು ಯಾವ ಕೃತ್ರಿಮ ಉಪಾಯದಿಂದಲೂ ತಪ್ಪಿಸುವದು ಆಗ ಲಾರದೆಂಬುವದು ನನಗೆ ಪೂರ್ಣವಾಗಿ ಗೊತ್ತಿರುವದು. ಒಂದು ವೇಳೆ ನಾನು ನಿನ್ನ ಕಣ್ಮರೆಯಾದಲ್ಲಿ ನೀನು ನನ್ನನ್ನು ಕಾಲಾಂತರದಿಂದ ಮರೆ ಯಲು ಸಮರ್ಥಳಾಗಬಹುದೆಂದು ನೆನಿಸಿ ನಿನಗೆ ಗೊತ್ತಿಲ್ಲದಂಥ ಮತ್ತು ನಿನಗೆ ಎಂದೂ ಬರಲಿಕ್ಕೆ ಸಾಧ್ಯವಾಗದಂಥ ಸ್ಥಳಕ್ಕೆ ಹೋಗುವ ಕುರಿತು ನಾನು ನನ್ನ ಮಾರ್ಗಕ್ರಮಣ ಮಾಡುತ್ತೇನೆ.

"ಸುಶೀಲೇ! ನೀನು ಪವಿತ್ರಳಿರುತ್ತೀ! ಸರಳಹೃದಯಳೇ, ನೀನು ತಪಸ್ವಿ ಕನ್ನಿಕೆಯು. ನಿನ್ನನ್ನು ನಾನು ಹೇಗೆ ಅಪವಿತ್ರಮಾಡೇನು? ನಿರ್ದೋಷ-ನಿಷ್ಕಲಂಕ ದೇವಿಯಾದ ನಿನಗೆ ನಾನು ಹೇಗೆ ಕಲಂಕವನ್ನು ಹಚ್ಚೇನು? ಸಾವಿರಾರು ಚೇಳುಗಳು ಕಡಿದಂತೆ ನನ್ನ ಸರ್ವಾಂಗದಲ್ಲಿ ದುಃಖಾಗ್ನಿಯು ಪ್ರಜ್ವಲಿತವಾಗಿರುತ್ತದೆ. ಈ ದುಸ್ಸಹವಾದ ದುಃಖದಿಂದ ನಾನು ಸುಟ್ಟು ಭಸ್ಮವಾಗುವದು ನಿಜವು. ಇಂಥ ದುಃಖದಲ್ಲಿಯೂ ನಿನ್ನ ಪವಿತ್ರವಾದ ಮೂರ್ತಿಯನ್ನು ನನ್ನ ಹೃದಯದಲ್ಲಿರಿಸುವೆನು. ನನ್ನ ಹೃದಯದಲ್ಲಿ ಗಟ್ಟಿಯಾಗಿ ನೆಟ್ಟಿರುವ ನಿನ್ನ ಪವಿತ್ರವಾದ ಮೂರ್ತಿಯನ್ನು ಈ ಜೀವವಿರುವವರೆಗೆ ಕೀಳುವದು ನನ್ನಿಂದಂತೂ ಆಗದು. ಸುಶೀಲೇ! ಇಷ್ಟು ದಿವಸ ಸಂಭವಿಸಿದ ಸಂಗತಿಗಳನ್ನು ಮರೆತುಬಿಡು. ನಾವೆಲ್ಲರು ಸ್ವಪ್ನದಲ್ಲಿ ಅದ್ಭುತ ಸಂಗತಿಗಳನ್ನು ನೋಡುವಂತೆ ನೀನು ಇದೊಂದು ಸ್ವಪ್ನವನ್ನೇ ಕಂಡಿ ಯೆಂದು ತಿಳಿದುಕೋ. ಸ್ವಪ್ನದಲ್ಲಿ ನಿನ್ನ ದೃಷ್ಟಿಗೆ ಬಿದ್ದ ದುರ್ದೈವಿಯಾದ ಮಹೇಶನು ಮರಣಹೊಂದಿದನೆಂತಲೂ, ಜಾಗ್ರತಾವಸ್ಥೆಯಲ್ಲಿ ಅವನ ಬೆಟ್ಟಿ ಯಾಗುವ ಆಶೆಯನ್ನು ಹಿಡಿಯುವದು ವ್ಯರ್ಥವೆಂತಲೂ, ನಿನ್ನ ಮನಸ್ಸಿಗೆ ಸಮಾಧಾನಮಾಡಿಕೊಂಡು ನಿನ್ನ ಮನಸ್ಸನ್ನು ಸ್ಥಿರಪಡಿಸು. ದೇವರು ನಿನಗೆ ಯಾವಾಗಲು ಕಲ್ಯಾಣವನ್ನು ಮಾಡಿ ನಿನ್ನನ್ನು ಸುಖದಿಂದ ಇಡಲಿ!

ನಿನಗೆ ಯಾವದಾದರೂ ಪ್ರಸಂಗದಲ್ಲಿ ನನ್ನ ಸಹಾಯವು ಬೇಕಾದರೆ ನನಗೆ ಹೇಳಿಕಳಿಸು; ಅಂದರೆ ನಾನು ಬೇಕಾದಲ್ಲಿದ್ದರೂ, ಬೇಕಾದಂಥ ರಾಜ ಕಾರಣದಲ್ಲಿ ತೊಡಗಿದ್ದರೂ, ಅದನ್ನು ಬಿಟ್ಟುಕೊಟ್ಟು ಬಂದು ನಿನ್ನ ಕೆಲಸವನ್ನು ತ್ವರೆಯಿಂದ ಮಾಡುವೆನು. ನಿನ್ನ ಕೆಲಸಕ್ಕಾಗಿ ಈ ಜೀವ ವನ್ನು ಸಹ ಸಂತೋಷದಿಂದ ಅರ್ಪಿಸುತ್ತೇನೆಂದು ನಂಬು!

"ನಿನ್ನ ಪ್ರೀತ್ಯಾಸ್ಪದನಾದ **ಮಹೇಶ.**"

ಈ ಪ್ರಕಾರ ದುಃಖಮಗ್ನಳಾದ ಸುಶೀಲೆಯು ಹಾಗೂ ಹೀಗೂ ಮಾಡಿ ಪತ್ರ ಓದುವದನ್ನು ಮುಗಿಸಿದಳು. ತರುವಾಯ ಅವಳು ದುಃಖಾತಿಶಯ ದಿಂದ ನಿಟ್ಟುಸುರು ಬಿಡುತ್ತ ಬಹಳವಾಗಿ ಶೋಕವನ್ನು ಮಾಡಿದಳು. ಅವಳ ನೇತ್ರಗಳಿಂದ ಅಶ್ರುಗಳು ಬಿಟ್ಟೂಬಿಡದೆ ಬಹಳೊತ್ತಿನಕ ಸುರಿದವು. ಆಶೆಯು ಸಮೂಲವಾಗಿ ಕಮರಿಹೋದ್ದರಿಂದ ಯಾರಿಗೆ ದುಃಖವೆನಿಸಲಿಕ್ಕಿಲ್ಲ? ಆಶೆಯಿಂದ ಜೀವವನ್ನು ಹಿಡಿಯಬೇಕಲ್ಲದೆ ಆಶೆಯು ಅಳಿದ ಬಳಿಕ ಮನೆ ಯೂ ಸ್ಮಶಾನವೂ ಒಂದೇ! ಈ ಪ್ರಕಾರ ನಿರಾಶೆಹೊಂದಿದ ದುರ್ದೈವಿ ಯಾದ ಸುಶೀಲೆಯು ಕೈಕಾಲು ಮುರಿದವಳಂತೆ ಅತ್ಯಂತ ದೀನತೆಯಿಂದ ಅಳುತ್ತ ಕುಳಿತಳು. ಏನು ಮಾಡಿದರೂ ಅವಳ ಕಣ್ಣಮುಂದೆ ಕಟ್ಟಿದ ಮಹೇಶನ ಮೂರ್ತಿಯು ಅರಗಳಿಗೆ ಸಹ ಸರಿದಾಡಲಿಲ್ಲ. ಈ ಪ್ರಕಾರ ಕೆಲವು ಹೊತ್ತು ಅವಳು ಅತ್ತು ಅತ್ತು ಬೇಸತ್ತು ದುಃಖದ ವೇಗವು ಕಿಂಚಿತ್ತು ಶಾಂತವಾದ ತರುವಾಯ ಆ ಉದಾರಚರಿತನಾದ ಮಹೇಶನ ಸದ್ಗುಣ ಗಳನ್ನು ನೆನಿಸತೊಡಗಿದಳು. ಮಹೇಶನ ಮನೋನಿಗ್ರಹವನ್ನೂ, ಔದಾ ರ್ಯವನ್ನೂ ಪವಿತ್ರತೆಯನ್ನೂ ನೆನಿಸಿ ಸುಶೀಲೆಯು ಬಹಳ ಕೌತುಕಪಡುತ್ತ ಕುಳಿತಳು. ಆಕೆಯ ಮನಸ್ಸಿನಲ್ಲಿ ವಿಚಾರಗಳ ಕ್ರಾಂತಿಯು ನಡೆ ಯಿತು. ಆಕೆಯ ಮನಸ್ಸಿನಲ್ಲಿ ಒಂದು ಕಡೆಗೆ ಪಿತನು, ಮತ್ತೊಂದು ಕಡೆಗೆ ಮಹೇಶನು – ಒಂದು ಕಡೆಗೆ ಭಕ್ತಿಯು, ಮತ್ತೊಂದು ಕಡೆಗೆ ಪ್ರೀತಿಯು- ಈ ಪ್ರಕಾರ ವಿಚಾರಗಳ ಪರಂಪರೆಯು ನಡೆದಿರಲು ಅವಳ ಸ್ಥಿತಿಯು ಹೇಗಾಗಿರುವದೆಂಬುವದನ್ನು ಬಣ್ಣಿಸುವದು ಕಠಿಣವೇ ಸರಿ. ಈ ಪ್ರಕಾರ ಕೆಲವು ಕಾಲ ಸುಶೀಲೆಯು ಗೊಂದಲದಲ್ಲಿ ಬಿದ್ದರೂ ಕಡೆಗೆ ಪ್ರೀತಿಯು

ಕಿಂತಲು ಭಕ್ತಿಯನ್ನೇ ಆದರಿಸಿ ಸ್ವಪ್ನಸೃಷ್ಟಿಯಲ್ಲಿ ದರ್ಶನಕೊಟ್ಟ ಮಹೇಶ ನನ್ನು ತನ್ನ ಸ್ಮೃತಿಪಥದಿಂದ ಅಂತರಿಸಬೇಕೆಂದು ನಿರ್ಧಾರಮಾಡಿದಳು. ಪವಿತ್ರಹೃದಯಳಾದ ಸುಶೀಲೆಯು ಈ ನಿರ್ಧಾರವನ್ನು ಮಾಡಿದ ಕ್ಷಣದಲ್ಲಿಯೇ ಪುನಃ ಅವಳ ಕಣ್ಣೊಳಗಿಂದ ದುಃಖಾಶ್ರುಗಳು ಸುರಿದವು. ಅವಳು ಪುನಃ ದೊಡ್ಡ ಧ್ವನಿಯಿಂದ ಅಳಲಾರಂಭಿಸಿದಳು. ಸುಶೀಲೆಯ ಆ ವಿಲಾಪವನ್ನೂ ದೈನ್ಯಾವಸ್ಥೆಯನ್ನೂ ಕಣ್ಣಿನಿಂದ ನೋಡಲಾಗದು! ಕಿವಿಯಿಂದ ಕೇಳಲಾಗದು! ವಾಚಕರೇ ನಡೆಯಿರಿ. ನಾವು ಸ್ವಲ್ಪ ಕಠೋರ ಮನಸ್ಸಿನವರಾಗಿ ದುಃಖದಿಂದ ಬಳಲುತ್ತಿದ್ದ ಸುಶೀಲೆಯನ್ನು ಇಲ್ಲಿಯೇ ಬಿಟ್ಟು ಕೊಟ್ಟು ಯಾವದಾದರೂ ಶಾಂತಸ್ಥಳಕ್ಕೆ ಹೋಗಿ ಸ್ವಲ್ಪ ಹೊತ್ತು ವಿರಮಿಸೋಣ.

# ಭಾಗ ೫.

## ಸೆರೆ ಹಿಡಿದು ತಂದ ತರುಣಿಯು.

ಪ್ರಿಯ ವಾಚಕರೇ! ನಾವು ಸ್ವಲ್ಪ ಹೊತ್ತು ವಿರಮಿಸಬೇಕೆಂದು ಇತ್ತ ಕಡೆಗೆ ಹೊರಟು ಬಂದೆವು. ಆದರೆ "ರಾಮೇಶ್ವರಕ್ಕೆ ಹೋದರೂ ಶನೇಶ್ವರನು ಬಿಡನು" ಎಂಬಂತೆ ದುರ್ದೈವದಿಂದ ಇಲ್ಲಿಯೂ ನಮ್ಮ ಮನಸ್ಸಿಗೆ ಶಾಂತತೆಯು ದೊರಕುವ ಆಶೆಯು ಕಾಣುವದಿಲ್ಲ! ಆ ವಿಧಾತೃವು ನಮ್ಮ ದೈವದಲ್ಲಿ ಸುಖವನ್ನು ಬರೆಯದೆ ಬಿಟ್ಟಿದ್ದರೆ ನಮ್ಮ ಉಪಾಯವೇನದ? ಯಾಕಂದರೆ ಎಲ್ಲಿ ನೋಡಿದಲ್ಲಿ ಬಂಡುಗಳೂ, ಭಯಂಕರ ದ್ರೋಹಗಳೂ ನಡೆದಿರುತ್ತವೆ. ಜನರಿಗೆ ಸ್ವಸ್ಥತೆಯು ಸ್ವಪ್ನದಲ್ಲಿ ಸಹ ದುರ್ಲಭವಾಗಿರುತ್ತದೆ. ಸ್ವತಃ ಅಕಬರ ಸಾರ್ವಭೌಮನು ಪ್ರಚಂಡ ಸೈನ್ಯವನ್ನು ತನ್ನ ಸಂಗಡ ಕರೆದುಕೊಂಡು ಬಂಡುಗಾರರ ಪಾರುಪತ್ಯಮಾಡಲಿಕ್ಕೆ ಹೊರಟಿರುತ್ತಾನೆ. ರಜಪುತ ವೀರಶ್ರೇಷ್ಠನಾದ ಮಹಾರಾಣಾ ಪ್ರತಾಪಸಿಂಹನು ರಜಪುತಸ್ಥಾನದಲ್ಲಿ ತನ್ನ ಸಂಪೂರ್ಣ ಸಾಮ್ರಾಜ್ಯವನ್ನು ಸ್ಥಾಪಿಸಿ, ಅಕಬರ ಸಾರ್ವಭೌಮನ ಸಾಮ್ರಾಜ್ಯಾಧಿಪತ್ಯವನ್ನು ನಿರಾಕರಿಸುತ್ತಲಿದ್ದಾನೆ. ಈ

ಪ್ರತಾಪ ರವಿಯ ತೇಜೋಕಿರಣಗಳಿಂದ ಪ್ರದೀಪ್ತರಾದ ಉಳಿದ ಮಾಂಡಲಿಕ ಅರಸರು ಇವನ ಆಶ್ರಯಛತ್ರದಲ್ಲಿ ಸೇರಲಾರಂಭಿಸಿರುತ್ತಾರೆ. ಪ್ರತಾಪ ಸಿಂಹನು ಸಾಮಾನ್ಯ ಶತ್ರುವಲ್ಲದ್ದರಿಂದ ಅವನನ್ನು ಹೇಗೆ ಅಂಕಿತದಲ್ಲಿಟ್ಟು ಕೊಳ್ಳಬೇಕೆಂದು ಅಕಬರ ಸಾರ್ವಭೌಮನು ಬಹಳ ವ್ಯಸನದಲ್ಲಿ ಮಗ್ನ ನಾಗಿರುತ್ತಾನೆ. ಆದ್ದರಿಂದ ಸ್ವಾಭಾವಿಕವಾಗಿ ಅಸ್ವಾಸ್ಥ್ಯವು ಆಕ್ರಮಿಸಿರು ತ್ತದೆ. ಇಂಥ ಸಮಯದಲ್ಲಿ ಅಕಬರ ಸಾರ್ವಭೌಮನು ಪ್ರತಾಪಸಿಂಹನ ಆಶ್ರಯಛತ್ರದಲ್ಲಿ ಸೇರಿಕೊಳ್ಳಲಾರಂಭಿಸಿದ ಮಾಂಡಲೀಕ ಅರಸರಿಗೆ ಹೆದ ರಿಕೆಯನ್ನು ಕೂಡ್ರಿಸಬೇಕೆಂದು ಆಲೋಚಿಸಿ ಮೊದಲು ಚಿತ್ತೂರಿನ ಮೇಲೆ ಮುತ್ತಿಗೆ ಹಾಕುವದನ್ನು ನಿಶ್ಚಯಿಸಿದನು. ಬಳಿಕ ಅವನು ಶಕ್ತಿಗಡದ ರಾಣನಿಗೆ "ನನ್ನ ಸೈನ್ಯದ ಜನರಿಗೆ ನಿನ್ನ ರಾಜ್ಯದೊಳಗಿಂದ ಹೋಗಲಿಕ್ಕೆ ದಾರಿಯನ್ನು ಕೊಡು" ಎಂದು ತನ್ನ ಸುದ್ದಿಗಾರನ ಕೈಯಿಂದ ಪತ್ರವನ್ನು ಬರೆದು ಕಳಿಸಿದನು. ಶಕ್ತಿಗಡದ ರಾಣನು ಅಕಬರ ಬಾದಶಹನ ಸಂಗಡ ರಾಜನಿಷ್ಠೆಯಿಂದಲೂ, ಸ್ನೇಹದಿಂದಲೂ ನಡೆಯುತ್ತಿದ್ದದರಿಂದ ಅವನ ರಾಜ್ಯ ದೊಳಗಿಂದ ಚಿತ್ತೂರಿಗೆ ಸೈನ್ಯವನ್ನು ಒಯ್ದರೆ ಬಹಳ ಅನುಕೂಲವೂ, ಸುಖ ಕರವೂ ಆಗುವದೆಂದು ನೆನಿಸಿ ಅಕಬರನು ಈ ಗೌರವದ ಪತ್ರವನ್ನು ಬರೆ ಯಲು "ನಚ್ಚಿದ ಎಮ್ಮೆಯು ಕೋಣವನ್ನು ಈಯಿತು" ಎಂಬಂತೆ ಅವನು ಮೊದಲೇ ರಾಣಾ ಪ್ರತಾಪಸಿಂಹನ ಕಡೆಗೆ ಸೇರಿಕೊಂಡದ್ದರಿಂದ ಆ ಪತ್ರಕ್ಕೆ ಎಳ್ಳಷ್ಟು ಸಹ ಮಾನಕೊಡಲಿಲ್ಲ. ಇಷ್ಟೇ ಅಲ್ಲ; ಅಕಬರ ಬಾದಶಹನ ಕಡೆಯಿಂದ ಪತ್ರವನ್ನು ತೆಗೆದುಕೊಂಡು ಬಂದಂಥ ಮನುಷ್ಯನಿಗೆ ಮದೋ ನ್ಮತ್ತನಾದ ಶಕ್ತಿಗಡದ ರಾಣನು ಉದ್ಧಟತನದಿಂದ ಮಾತಾಡಿ ಅವನ ಅಪ ಮಾನವನ್ನು ಮಾಡಿದನು. ಇದು ಅಕಬರ ಬಾದಶಹನಿಗೆ ಗೊತ್ತಾದ ಕೂಡಲೆ ಅವನ ಪಿತ್ತವು ನೆತ್ತಿಗೇರಿತು. ಒಬ್ಬ ಸಾಮಾನ್ಯನಾದ ಮಾಂಡ ಲೀಕ ಸರದಾರನು ಈ ಪ್ರಕಾರ ತನ್ನ ಅಪಮಾನ ಮಾಡಿದ್ದರಿಂದ ಅವನನ್ನು ಒಮ್ಮೆಲೆ ಸೆರೆ ಹಿಡಿದುಕೊಂಡು ಬರಲಿಕ್ಕೆ ತನ್ನ ದರಬಾರದೊಳಗೆ ಸರದಾರ ರಿಗೆ ಅಪ್ಪಣೆಯನ್ನು ಕೊಟ್ಟನು. ಕೂಡಲೆ ಅಂಬರದ ರಾಣನಾದ ಮಾನಸಿಂಹನು ಮುಂದಕ್ಕೆ ಬಂದು ವೀಳ್ಯವನ್ನು ಎತ್ತಿ ಅಸಂಖ್ಯವಾದ

ಮೊಗಲ ಸೈನ್ಯವನ್ನು ತನ್ನ ಸಂಗಡ ಕರೆದುಕೊಂಡು ಅತ್ಯಂತ ವೇಗ ದಿಂದ ದಾರಿಯನ್ನು ನಡೆದು ಶಕ್ತಿಗಡಕ್ಕೆ ಮುಟ್ಟಿ, ಶಕ್ತಿಗಡಕ್ಕೆ ಒಮ್ಮೆಲೆ ಮುತ್ತಿಗೆಯನ್ನು ಹಾಕಿದನು. ಶಕ್ತಿಗಡದ ರಾಣನಾದರೂ ತನ್ನ ಸಿದ್ಧತೆ ಯಲ್ಲಿಯೇ ಇದ್ದನು. ಆದ್ದರಿಂದ ಉಭಯತರೊಳಗೆ ಘನಘೋರವಾದ ರಣಸಂಗ್ರಾಮವು ನಡೆದು ಸಾವಿರಾರು ಮೊಗಲ ಮತ್ತು ರಜಪುತ ಸಿಪಾ ಯರು ರಣದಲ್ಲಿ ಮಡೆದರು. ರಕ್ತದ ಕಾಲುವೆಗಳು ಹರಿದವು. ಕಡೆಗೆ ವಿಜಯಶ್ರೀಯು ಮಾನಸಿಂಹನ ಕೊರಳಲ್ಲಿ ಮಾಲೆಯನ್ನು ಹಾಕಿದಳು. ಶಕ್ತಿಗಡದ ರಾಣನು ಅಪಜಯವನ್ನು ಹೊಂದಿ ಮೊಗಲರ ಹಸ್ತಗತನಾದನು. ಆಗ ಮಾನಸಿಂಹನು ಅವನನ್ನು ಸೆರೆಹಿಡಿದು ಕೂಡಲೆ, ದಿಲ್ಲಿಗೆ ಕಳಿಸಿ ಅವನ ಅಂತಃಪುರದ ಸ್ತ್ರೀಯರನ್ನು ಸಹ ಸೆರೆಹಿಡಿದನು.

ಯುದ್ಧದ ಪರಿಸಮಾಪ್ತಿಯು ಈ ಪ್ರಕಾರ ಆಗಿ ಯಾವತ್ತು ವ್ಯವಸ್ಥೆ ಯು ಸ್ಥಿರವಾಗಿ ಆದ ನಂತರ ಮಾನಸಿಂಹನು ದರಬಾರವನ್ನು ನೆರೆಯಿಸಿ ಅಂತಃಪುರದ ಯಾವತ್ತು ಸ್ತ್ರೀಯರನ್ನು ಬಂಧಮುಕ್ತಮಾಡಿದನು. ಆದರೆ ಸೆರೆಹಿಡಿದು ತಂದ ಸ್ತ್ರೀಯರೊಳಗೆ ಹದಿನಾರು ವರ್ಷದ ಒಬ್ಬ ರೂಪವತಿ ಯಾದ ತರುಣಿ ಇದ್ದಳು. ಅವಳನ್ನು ಮಾನಸಿಂಹನು ಮುಕ್ತಮಾಡಲಿಲ್ಲ. ಅವಳನ್ನು ತನ್ನ ಬಿಡಾರಕ್ಕೆ ಕರೆದೊಯ್ಯಲಿಕ್ಕೆ ಮಾನಸಿಂಹನು ಅಪ್ಪಣೆಯನ್ನು ಮಾಡಿದನು.

ದರಬಾರವು ಮುಗಿದ ನಂತರ ರಾಣಾ ಮಾನಸಿಂಹನು ತನ್ನ ಬಿಡಾರಕ್ಕೆ ಹೋದ ಕೂಡಲೆ ಮೊದಲಿಗೆ ತನ್ನ ಮುಂದೆ ಆ ಸೆರೆಹಿಡಿದು ತಂದ ತರುಣಿ ಯನ್ನು ತೆಗೆದುಕೊಂಡು ಬಾ ಎಂದು ತನ್ನ ಸೇವಕನಿಗೆ ಅಪ್ಪಣೆಯನ್ನು ಮಾಡಿದನು. ಆ ತರುಣಿಯ ಅಪ್ರತಿಮವಾದ ಸೌಂದರ್ಯವನ್ನು ನೋಡಿ, ಮಾನಸಿಂಹನು ಅವಳಿಗೆ ತೀರ ಮರುಳಾಗಿದ್ದನು. ಅವಳು ಅವನ ಮುಂದೆ ಬರುತ್ತಲೆ ಅವನು ಅವಳನ್ನುದ್ದೇಶಿಸಿ–“ಸುಂದರೀ! ಯುದ್ಧದಲ್ಲಿ ಮಾಡಿದ ಸುಲಿಗೆಯೂ, ಸೆರೆ ಹಿಡಿದು ತಂದ ಸ್ತ್ರೀಯರೂ, ವೀರರು ಉಪಭೋಗಿಸತಕ್ಕ ಪದಾರ್ಥಗಳೆಂಬುವದು ನಿನಗೆ ಗೊತ್ತೇ ಅದೆ. ಯುದ್ಧದಲ್ಲಿ ದೊರಕಿದ ಸುಂದರ ಸ್ತ್ರೀಯರನ್ನು ಬಾದಶಹನ ಜನಾನಖಾನೆಯಲ್ಲಿ ಒಯ್ದು ತುಂಬುವದು

ನಮ್ಮ ಸಾಂಪ್ರದಾಯವುಂಟು. ಆದರೂ ನೀನು ರಜಪುತ ಕನ್ನಿಕೆಯಾಗಿರುವದರಿಂದ ಆ ಸಾಂಪ್ರದಾಯದ ವಿರುದ್ಧವಾಗಿ ನಿನ್ನನ್ನು ನನ್ನ ಅಂತಃಪುರಕ್ಕೆ ತಂದಿರುತ್ತೇನೆ. ನಿನಗೆ ಇಲ್ಲಿ ಯಾವತ್ತು ಸುಖೋಪಭೋಗಗಳೂ ವೈಭವವೂ ದೊರಕುವವು. ನಿನಗೆ ಯಾತರಿಂದಲೂ ಕೊರತೆಯುಂಟಾಗಲಾರದು; ಹಾಗೂ ಕಷ್ಟವೆನಿಸಲಾರದು. ನನ್ನ ಅಂತಃಪುರದಲ್ಲಿ ನಿನಗೆ ಮುಖ್ಯಸ್ಥಾನವು ದೊರಕುವದಲ್ಲದೆ ನಿನಗೆ ನನ್ನ ಪಟ್ಟರಾಣಿಯ ಮಾನವು ಸಹ ದೊರಕುವದು" ಅಂದನು.

ಸೇನಾಪತಿಯಾದ ಮಾನಸಿಂಹನ ಈ ಚಮತ್ಕಾರದ ಮಾತನ್ನು ಕೇಳಿ, ಆ ದೀನ ನಿರಾಶ್ರಿತಳಾದ ಬಾಲಿಕೆಯು ಅಂಜಿಕೆಯಿಂದ ನಡಗುತ್ತ ದೈನ್ಯೋಕ್ತಿಯಿಂದ— "ಮಹಾರಾಜರೇ! ತಾವು ಕ್ಷತ್ರಿಯರೂ, ವೀರಪುರುಷರೂ, ನ್ಯಾಯಕರ್ತರೂ ಆಗಿರುತ್ತೀರಿ. ತಾವು ಉದಾರ ಅಂತಃಕರಣದಿಂದ ಯಾವತ್ತರನ್ನು ಬಿಡುಗಡೆ ಮಾಡಿ ಪುಣ್ಯವನ್ನು ಕಟ್ಟಕೊಂಡಿರುತ್ತೀರಿ. ಅಂದಬಳಿಕ ಹತಭಾಗ್ಯಳಾದ ನಾನೊಬ್ಬಳೇ ನಿಮ್ಮ ಔದಾರ್ಯಕ್ಕೆ ಎರವಾಗುವ ಕಾರಣವೇನು?" ಎಂದು ಪ್ರಶ್ನೆ ಮಾಡಿದಳು.

ಆ ಪವಿತ್ರ ಬಾಲಿಕೆಯ ಸರಳ ಪ್ರಶ್ನೆಗೆ ಏನು ಉತ್ತರಕೊಡಬೇಕೆಂಬುವದು ಪ್ರತಾಪಶಾಲಿಯಾದ ಮಾನಸಿಂಹನಿಗೆ ತಿಳಿಯದೆ ಹೋಯಿತು. ಅವನು ಸ್ವಲ್ಪಹೊತ್ತು ತತ್ತರಿಸಿದನು. ಕೆಮ್ಮುವದೂ, ಆಕಳಿಸುವದೂ, ಕೈಯಿಂದ ಚುಟಕಿ ಹೊಡೆಯುವದೂ ನಡೆದವು. ಆದರೆ ಅವನಿಗೆ ಯೋಗ್ಯ ಉತ್ತರವೇ ಸೂಚಿಸಲಿಲ್ಲ! ಅವನು ಬಹಳ ಗೊಂದಲದಲ್ಲಿ ಬಿದ್ದನು. ಯೋಗ್ಯ ಉತ್ತರವನ್ನು ಕೊಡಲಿಕ್ಕಾಗದ್ದರಿಂದ ಮೂಕಗೊಂಬೆಯಂತೆ ಸುಮ್ಮನೆ ಕುಳಿತುಬಿಟ್ಟನು. ಇಂಥ ದೊಡ್ಡ ಸೇನಾಪತಿಯು ಒಬ್ಬ ಸಾಮಾನ್ಯ ಹುಡುಗಿಯ ಸರಳ ಪ್ರಶ್ನೆಗೆ ಉತ್ತರ ಕೊಡಲಿಕ್ಕಾಗದೆ ಭ್ರಮಿಷ್ಟನಂತೆ ಕುಳಿತದ್ದು ಆಶ್ಚರ್ಯವಲ್ಲವೇ? ಆದರೆ ಅವನ ಮೇಲೆ ಬಂದಿದ್ದ ಸಂಕಟವು ಅಲ್ಲಿಗೆ ಅದೇ ಕಾಲಕ್ಕೆ ಒಬ್ಬಾನೊಬ್ಬ ಕಾವಲುಗಾರನಾದ ಸಿಪಾಯಿಯು ಬಂದಿದ್ದರಿಂದ ತಪ್ಪಿತು. ಯಾಕಂದರೆ ಆ ಸಿಪಾಯಿಯು ಮಾನಸಿಂಹನಿಗೆ ಮರ್ಯಾದೆಪೂರ್ವಕವಾಗಿ ಮುಜರಿ ಮಾಡಿ:"ಮಹಾರಾಜರೇ! ಬಾದಶಹನ

ಕಡೆಯ ಸುದ್ದಿಗಾರನು ತಮ್ಮನ್ನು ಕಾಣಬೇಕೆಂಬ ಲವಲವಿಕೆಯಿಂದ ಹೊರಗೆ ಬಂದು ನಿಂತುಕೊಂಡಿರುತ್ತಾನೆ. ತಮ್ಮ ಕಿವಿಯ ಮೇಲೆ ಯಾವದೋ ಒಂದು ಮಹತ್ವವಾದ ಸುದ್ದಿಯನ್ನು ಇಡತಕ್ಕದ್ದಿರುವದೆಂದು ಅವನು ಅನ್ನುತ್ತಾನೆ.” ಎಂದು ನುಡಿದನು.

ಈ ರೀತಿಯಿಂದ ಆ ಸಿಪಾಯಿಯು ಮಾನಸಿಂಹನ ಸಂಕಟವನ್ನು–ಅಲ್ಲಲ್ಲ,–ಅಪಮಾನವನ್ನು–ತಪ್ಪಿಸಿದ್ದಕ್ಕಾಗಿ ಮಾನಸಿಂಹನು ಅತ್ಯಂತವಾಗಿ ಆನಂದಪಟ್ಟು ಮನಸ್ಸಿನಲ್ಲಿ ಆ ಸಿಪಾಯಿಗೆ ಶಹಾಬಾಸಕಿಯನ್ನು ಕೊಟ್ಟು ಆ ಸುಂದರಿಗೆ “ಸುಂದರೀ! ಈಗ ನೀನು ಅಂತಃಪುರದೊಳಗೆ ಹೋಗು ನಿನ್ನ ಪ್ರಶ್ನೆಗೆ ನಾನು ಹಿಂದಗಡೆ ಸಾವಕಾಶದಿಂದ ಉತ್ತರಕೊಟ್ಟೇನು” ಎಂದು ಹೇಳಿ ಒಂದು ಕ್ಷಣವಾದರೂ ವಿಲಂಬಮಾಡದೆ ಒಮ್ಮೆಲೆ ಹೊರಬಿದ್ದು ಹೋದನು.

# ಭಾಗ ೬.

## ರಾಜಪತ್ನಿ.

ಬಾದಶಹನ ಕಡೆಯಿಂದ ಬಂದಂಥ ಸುದ್ದಿಗಾರನನ್ನು ಸತ್ಕರಿಸಿ ಕಳಿಸಿದ ತರುವಾಯ ಸೇನಾಪತಿಯಾದ ಮಾನಸಿಂಹನು ತನ್ನ ಬಿಡಾರದಲ್ಲಿ ರೇಶ್ಮೆಯ ಕಿನಕಾಪಿನಿಂದ ಮಾಡಿದ ಒಂದು ಸುಶೋಭಿತವಾದ ಡೇರೆಯೊಳಗೆ ಸುವರ್ಣ ಖಚಿತವಾದ ವಿರಾಮಾಸನದಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತ ಕುಳಿತಿರಲು, ಇಬ್ಬರು ತರುಣ ರೂಪವತಿಯರಾದ ದಾಸಿಯರು ಅವನ ಎರಡೂ ಪಾರ್ಶ್ವಗಳಲ್ಲಿ ನಿಂತು ಬಾಳದ ಬೇರಿನ ಬೀಸಣಿಕೆಗಳನ್ನು ಬೀಸುತ್ತಿರುವರು. ಆ ವಿರಾಮಾಸನದ ಸಮೀಪದಲ್ಲಿಯೇ ಒಂದು ವರ್ತುಲಾಕೃತಿಯ ಮೇಜು ಇದ್ದು ಅದರ ಮೇಲೆ ತರತರದ ಜರದ ಹೂವುಗಳ ಕಸೂತಿ ತೆಗೆದ ಸುಂದರವಾದ ರೇಶ್ಮೆಯ ವಸ್ತ್ರವು ಆಚ್ಛಾದಿಸಲ್ಪಟ್ಟದೆ. ಅದರ ಮೇಲೆ ಸುಗಂಧ ದ್ರವ್ಯವನ್ನು ತುಂಬಿದ ಚಿನ್ನದ ಬಟ್ಟಲಗಳು ಇಟ್ಟವೆ. ಕೆಲವು ಅಂತರದ ಮೇಲೆ ಅಗರ ಬತ್ತಿಗಳು ಉರಿಯುತ್ತಿವೆ. ಇದರಿಂದ ಮಾನಸಿಂಹನ

ವಿಶ್ರಾಮ ಮಂದಿರದ ತುಂಬೆಲ್ಲ ಸುಗಂಧವು ಹರಡಿಕೊಂಡಿರುತ್ತದೆ. ಇಂಥ ಸಮಯದಲ್ಲಿ ರಾಣನು ಏನೋ ಗುಪ್ತವಾದ ವಿಚಾರದಲ್ಲಿ ತೊಡಗಿರುವಂತೆ ಅವನ ಮೋರೆಯ ಮೇಲಿಂದ ಕಾಣುತ್ತಿರುವದು. ಅವನು ತನ್ನ ಬಲಗೈ ಯಲ್ಲಿ ಸುಗಂಧ ದ್ರವ್ಯದ ಕಡ್ಡಿಗಳನ್ನು ಹಿಡಿದು ವಾಸನೆಯನ್ನು ತೆಗೆದು ಕೊಳ್ಳುತ್ತಿರುವನು. ಎಡಗೈಯಲ್ಲಿ ಒಂದು ಪತ್ರವನ್ನು ಹಿಡಿದು ನಡು ನಡುವೆ ಓದುತ್ತಿರುವನು. ಈ ಪ್ರಕಾರ ಮಾನಸಿಂಹನು ವಿಚಾರದಲ್ಲಿ ಮಗ್ನನಾಗಿರಲು ಅವನ ಕಾವಲುಗಾರನಾದ ಸಿಪಾಯಿಯು ಒಳಗೆ ಬಂದು ಮುಜರಿಮಾಡಿ, "ತಮ್ಮ ದರ್ಶನ ತೆಗೆದುಕೊಳ್ಳುವ ಲವಲವಿಕೆಯಿಂದ ಒಬ್ಬಾನೊಬ್ಬ ಸನ್ಯಾಸಿಯು ಹೊರಗೆ ಕಾದುಕೊಂಡು ನಿಂತಿದ್ದಾನೆ. ತಮ್ಮ ಅಪ್ಪಣೆಯಾದಲ್ಲಿ ಅವನನ್ನು ಒಳಗೆ ಬಿಡುವೆನು" ಎಂದನು. ಅದನ್ನು ಕೇಳಿ ಮಾನಸಿಂಹನು ಚಕಿತನಾಗಿ "ಸನ್ಯಾಸಿಯು ಬಂದಿರುವನೇ? ಸನ್ಯಾಸಿಯ ಕೆಲಸವು ನನ್ನ ಕಡೆಗೆ ಏನಿರುವದು" ಎಂದು ತನ್ನಷ್ಟಕ್ಕೆ ಬಾಯೊಳಗೆ ಮಾತಾಡಿ ಆ ಸಿಪಾಯಿಗೆ "ಒಳ್ಳೇದು. ಅವನನ್ನು ಒಳಗೆ ಬಿಡು" ಎಂದು ಹೇಳಿದನು.

ಆ ಕೂಡಲೆ, ಮೈತುಂಬ ಭಸ್ಮವನ್ನು ಲೇಪನಮಾಡಿ ಭಗವೀವಸ್ತ್ರ ಗಳನ್ನು ಧರಿಸಿ ಕೈಯಲ್ಲಿ ತ್ರಿಶೂಲವನ್ನು ಹಿಡಿದುಕೊಂಡಂಥ ಒಬ್ಬ ತೇಜಃ ಪುಂಜನಾದ ತಪಸ್ವಿಯು ಮಾನಸಿಂಹನ ಮುಂದೆ ಬಂದು ನಿಂತುಕೊಂಡನು. ಆ ತಪಸ್ವಿಯ ತೇಜಃಪುಂಜ ಶರೀರವನ್ನೂ, ಜ್ಯೋತಿರ್ಮಯ ಮುದ್ರೆ ಯನ್ನೂ ನೋಡಿದ ಕೂಡಲೆ ಅವನ ಬಗ್ಗೆ ಎಂಥವರಿಗಾದರೂ ಪೂಜ್ಯ ಬುದ್ಧಿಯು ಉತ್ಪನ್ನವಾಗುವದು ಸ್ವಾಭಾವಿಕವೇ! ಇಂಥ ದಿವ್ಯ ಮೂರ್ತಿ ಯು ಮಾನಸಿಂಹನ ಮುಂದೆ ಬಂದು ನಿಂತುಕೊಳ್ಳಲು ಮಾನಸಿಂಹನು ಚಟಕ್ಕನೆ ಎದ್ದು ಅವನಿಗೆ ಸಾಂಷ್ಟಾಂಗ ಪ್ರಣಾಮಗಳನ್ನು ಮಾಡಿ ಬಹು ಆದರದಿಂದ ಅವನನ್ನು ಉಚ್ಚಾಸನದ ಮೇಲೆ ಕುಳ್ಳಿರಿಸಿದನು. ತರುವಾಯ ಆ ತಪಸ್ವಿಯು ಸದ್ಗದಿತ ಕಂಠದಿಂದ "ಮಹಾರಾಜನೇ," ಎಂದು ಮಾತಾಡ ಲಿಕ್ಕೆ ಆರಂಭಿಸಲು ಮುಂದೆ ಅವನ ಬಾಯಿಂದ ಶಬ್ದಗಳೇ ಹೊರಡ ದಾದವು. ಅವನ ಕಣ್ಣೊಳಗೆ ನೀರು ಬಂದವು.

“ಅಪ್ಪಣೆಯಾಗಬೇಕು ಮಹಸ್” ಎಂದು ಮಾನಸಿಂಹನು ಕೈಜೋಡಿಸಿ ಪ್ರಾರ್ಥನೆಯನ್ನು ಮಾಡಿದನು.

“ಮಹಾರಾಜನೇ! ನೀನು ದಿಲ್ಲೀಶ್ವರನ ಪ್ರತಾಪಶಾಲಿಯಾದ ಸೇನಾಪತಿಯು. ನಾನೊಬ್ಬ ಸಾಮಾನ್ಯ ತಪಸ್ವಿಯು. ನಾನು ನಿನ್ನ ಮೊರೆ ಇಡಲಿಕ್ಕೆ ಬಂದಿದ್ದೇನೆ. ರಾಜನೇ, ನನ್ನ ಜೀವವನ್ನು–ನನ್ನ ದರಿದ್ರನ ಧನವನ್ನು–ತಿರುಗಿ ಒಪ್ಪಿಸಿ ಪುಣ್ಯಕಟ್ಟಕೋ” ಎಂದು ಮಾತನಾಡುತ್ತಿರುವಲ್ಲಿ ಆ ಸನ್ಯಾಸಿಯ ಕಣ್ಣೊಳಗಿಂದ ದುಃಖಾಶ್ರುಗಳು ಉದುರಿದವು.

ಇದನ್ನು ನೋಡಿ ಮಾನಸಿಂಹನಿಗೆ ಬಹಳ ಖೇದವಾಯಿತು. ಅವನಿಗೆ ಆ ತಪಸ್ವಿಯ ಮಾತಿನ ಅರ್ಥವೇ ಗೊತ್ತಾಗಲಿಲ್ಲ. ಅವನ ತರ್ಕವು ಕುಂಠಿತವಾಯಿತು. ಆಗ ಅವನು ತನ್ನ ಕಣ್ಣಿನ ಎವೆಯಿಕ್ಕದೆ ಕೆಲವು ಹೊತ್ತು ಆ ತಪಸ್ವಿಯ ಮೋರೆಯ ಕಡೆಗೆ ನೋಡುತ್ತ ನಿಂತುಕೊಂಡು ಆ ನಂತರ: “ಪ್ರಭುವೇ, ತಮ್ಮ ಅಪ್ಪಣೆಯನ್ನು ಈ ದಾಸನಿಗೆ ಸ್ಪಷ್ಟವಾಗಿ ತಿಳಿಸಬೇಕು.” ಎಂದು ಬೇಡಿಕೊಂಡನು.

“ರಾಜನೇ, ನೀನು ರಜಪುತನಿದ್ದು ದೊಡ್ಡ ಕ್ಷತ್ರಿಯ ಕುಲದಲ್ಲಿ ಜನಿಸಿರುತ್ತೀ. ಪ್ರಜೆಗಳ ಪೀಡೆಯನ್ನು ನಿವಾರಣಮಾಡಿ ಎಲ್ಲರಿಗೆ ನ್ಯಾಯಕೊಡುವದಕ್ಕಾಗಿಯೇ ದೇವರು ನಿನ್ನನ್ನು ಈ ಜನ್ಮದಲ್ಲಿ ಹಾಕಿರುತ್ತಾನೆ. ರಾಜನೇ, ಶಕ್ತಿಗಡದ ಕೋಟೆಯಿಂದ ಸೆರೆಹಿಡಿದು ತಂದಿದ್ದ ಯಾವತ್ತು ಸ್ತ್ರೀಯರನ್ನು ನೀನು ಬಿಡುಗಡೆಮಾಡಿದ್ದು ಒಬ್ಬ ಬಾಲಿಕೆಯನ್ನು ಮಾತ್ರ ಇನ್ನೂ ಬಂಧನದಲ್ಲಿಟ್ಟಿರುತ್ತೀ. ಅವಳಿಗೆ ಮುಕ್ತಿದಾನವನ್ನು ಕೊಡು” ಎಂದು ನುಡಿದನು.

ಇದನ್ನು ಕೇಳಿದ ತರುವಾಯ ಮಾನಸಿಂಹನ ಮನಸ್ಸಿನಲ್ಲಿ ಆ ತಪಸ್ವಿಯ ಉದ್ದೇಶವು ತುಸು ಹೊಳೆಯಲಾರಂಭಿಸಿತು. ಆದರೆ ತಪಸ್ವಿಯ ಭಾಷಣದಿಂದ ಮಾನಸಿಂಹನಿಗೆ ಬಹಳೇ ಆಶ್ಚರ್ಯವಾಯಿತು. ತಪಸ್ವಿಯು ಸಂಸಾರದಿಂದ ವಿರಕ್ತನಾಗಿರಲು ತಪಸ್ವಿಗೂ ಆ ಸೆರೆಹಿಡಿದು ತಂದಿದ್ದ ತರುಣಿಗೂ ಏನು ಸಂಬಂಧವಿರಬಹುದೆಂಬುವದು ಅವನಿಗೆ ಗೊತ್ತಾಗಲಿಲ್ಲ. ಆದ್ದರಿಂದ ಅವನು “ಪ್ರಭುಗಳೇ, ತಾವು ಇಂಥ ವಿಪರೀತವಾದ ಅಪ್ಪಣೆಯನ್ನು ಮಾಡಬೇಡಿರಿ. ನಾನು ಎಷ್ಟಾದರೂ ಬಾದಶಹನ ಸೇವಕನು.

ಅವನ ಅಪ್ಪಣೆಯನ್ನನುಸರಿಸಿ ನಡೆದುಕೊಳ್ಳುವದು ನನ್ನ ಧರ್ಮವಾಗಿದೆ" ಎಂದು ಉತ್ತರಕೊಟ್ಟನು.

ಆಗ ತಪಸ್ವಿಯು ಹೆಚ್ಚು ಖಿನ್ನನಾಗಿ "ಅದೆಲ್ಲ ನಿಜವು. ಆದರೆ ಸಕಲೈಶ್ವರ್ಯಗಳಿಂದ ಸಂಪನ್ನನಾದ ಅಕಬರ ಸಾರ್ವಭೌಮನಿಗೆ ಒಬ್ಬ ಸಾಮಾನ್ಯ ಸ್ತ್ರೀಯಳ ಪ್ರಾಪ್ತಿಯಿಂದ ಏನು ಲಾಭವಾದೀತು? ಎಲೋ ರಾಜನೇ, ನಾನು ಸನ್ಯಾಸಿಯ ಆಶ್ರಮವನ್ನು ತೆಗೆದುಕೊಂಡರೂ ಯಾವಳ ಮೇಲಿನ ಪ್ರೀತಿಯಗೋಸ್ಕರ ನನಗೆ ಸನ್ಯಾಸಿಯ ಧರ್ಮವನ್ನು ಪೂರ್ಣವಾಗಿ ಆಚರಿಸಲಿಕ್ಕೆ ಬರಲಿಲ್ಲವೋ, ಯಾವ ನನ್ನ ಪ್ರಿಯ ಬಾಲಿಕೆಯನ್ನು ಕೆಲವು ಪ್ರಸಂಗ ನಿಮಿತ್ಯದಿಂದ ಕೆಲವು ಕಾಲ ಪರಿಯಂತರ ನನ್ನಿಂದ ದೂರ ಇಟ್ಟ ಕಾರಣ ನನಗೆ ನನ್ನ ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡುವದು ಸಹ ಕಠಿಣವಾಯಿತೋ, ಯಾವಳನ್ನು ನಾನು ಉದ್ಯಾನಲತಿಕೆಯಂತೆ ನನ್ನ ಜೀವದಕಿಂತಲು ಹೆಚ್ಚು ಶ್ರಮಮಾಡಿ ಪೋಷಣಮಾಡಿರುತ್ತೇನೋ, ಯಾವಳ ಮೇಲೆ ನನ್ನ ಜೀವವು ಅವಲಂಬಿಸಿರುವದೋ ಅಂಥ ನನ್ನ ಸರ್ವಸ್ವವನ್ನು ಅಪಹರಿಸುವದರಿಂದ ನಿನ್ನಂಥ ವೈಭವಸಂಪನ್ನ ಪ್ರತಾಪಶಾಲಿಯಾದ ರಾಜನಿಗೆ ಏನು ಲಾಭವಾಗುವದು? ನಿನಗೂ ನಿನಗಿಂತ ಹೆಚ್ಚಿನ ವೈಭವಶಾಲಿಯಾದ ಅಕಬರಬಾದಶಹನಿಗೂ ಈ ದರಿದ್ರನ ಧನವನ್ನು ಅಪಹರಿಸುವದರಿಂದ ಯಾವ ಸುಖವು ಪ್ರಾಪ್ತಿಯಾಗುವದು?" ಎಂದನು.

ಆ ಬಳಿಕ ಸೇನಾಪತಿಯಾದ ಮಾನಸಿಂಹನು ಅತ್ಯಂತ ಉತ್ಸುಕತೆಯಿಂದ "ನಿಮಗೆ ಅವಳೇನು ಆಗಬೇಕು?" ಎಂದು ಕೇಳಿದನು.

ಅದಕ್ಕೆ ತಪಸ್ವಿಯು "ಅತ್ಯಂತ ಮಮತೆಯಿಂದ ಪಾಲನ ಮಾಡಿದ ನನ್ನ ಕನ್ಯೆಯು—ನನ್ನ ಜೀವ ಸರ್ವಸ್ವವು. ಅವಳನ್ನು ನಾನು ಅವಳ ಬಾಲ್ಯದಿಂದ ಸಂಗೋಪನಮಾಡಿ ಅವಳನ್ನು ಬೆಳೆಸಿರುವೆನು. ಆಜನ್ಮ ತಪಸ್ವಿಯು ಯಾವ ಪ್ರಕಾರ ಹರಿಣ ಬಾಲಕನ ಪಾಲನ-ಪೋಷಣ ಮಾಡಿ ಅವನೊಡನೆ ಮಾಯಾಬದ್ಧನಾಗುತ್ತಾನೋ ಅದರಂತೆ ನಾನು ಆ ಕನ್ಯೆಯೊಡನೆ ಮಾಯಾಬದ್ಧನಾಗಿರುತ್ತೇನೆ." ಎಂದು ಹೇಳಿದನು.

ತಪಸ್ವಿಯು ಈ ಮೇರೆಗೆ ನುಡಿದದ್ದನ್ನು ಕೇಳಿ ಮಾನಸಿಂಹನು ಹೆಚ್ಚು ಆಶ್ಚರ್ಯಪಟ್ಟು "ದ್ವಿಜೋತ್ತಮರೇ, ತಾವು ಬ್ರಾಹ್ಮಣರಿದ್ದು ಆ ತರುಣಿಯು ಕ್ಷತ್ರಿಯ ಕುಮಾರಿಯು ಇರುತ್ತಾಳೆಂದು ಕೇಳುತ್ತೇನೆ. ಅಂದ ಬಳಿಕ ಇದು ಹೇಗೆ?" ಎಂದು ತಿರುಗಿ ಕೇಳಿದನು.

ಆದಕ್ಕೆ ತಪಸ್ವಿಯು—"ರಾಜನ್! ಬ್ರಾಹ್ಮಣರು ಕ್ಷತ್ರಿಯ ಕನ್ನೆಯನ್ನು ಪಾಲನಮಾಡಬಾರದೆಂದು ಯಾವ ಶಾಸ್ತ್ರದಲ್ಲಿ ಹೇಳಿಯದೆ? ಆ ತರುಣಿಯು ಕೇವಲ ನಿರಾಶ್ರಿತ-ನಿರಾಧಾರಿ-ದೀನಬಾಲಿಕೆಯು ಇರುವಳು. ಅವಳಿಗೂ ಶಕ್ತಿಗಡದ ರಾಣನಿಗೂ ಏನೂ ಸಂಬಂಧವಿಲ್ಲ. ನಾನು ಹಲವು ವಿಶೇಷ ಕಾರಣದಗೋಸ್ಕರ ತೀರ್ಥಯಾತ್ರೆಗೆ ಹೋಗುವಾಗ ಅವಳನ್ನು ಶಕ್ತಿಗಡದ ರಾಣನ ಬಳಿಯಲ್ಲಿ ಸಂರಕ್ಷಣಕ್ಕಾಗಿ ಒಪ್ಪಿಸಿದ್ದನು. ಶಕ್ತಿಗಡದ ರಾಣನು ನನ್ನ ಶಿಷ್ಯನು. ನೀನು ಆ ರಾಣನಿಗೂ ಅವನ ಅಂತಃಪುರದ ಸ್ತ್ರೀಯರಿಗೂ ಸೆರೆಹಿಡಿದು ತಂದ ಸಮಯದಲ್ಲಿ ಈ ನಿರಪರಾಧಿಯಾದ ಬಾಲಿಕೆಯನ್ನು ಸೆರೆಹಿಡಿದಿರುವಿ. ಅವಳನ್ನು ಬಂಧಮುಕ್ತ ಮಾಡು. ಅಂದರೆ ನನ್ನ ಧನವನ್ನು ನನಗೆ ತಿರುಗಿ ಕೊಟ್ಟಂತಾಗುವದು!" ಅಂದನು.

ಆ ಸಮಯಕ್ಕೆ ಮಾನಸಿಂಹನ ನೇತ್ರಪಥದ ಮುಂದೆ ಆ ತರುಣಿಯ ರಮಣೀಯವಾದ ಮೂರ್ತಿಯು ಬಂದು ನಿಂತುಕೊಂಡಿತು. ತಪಸ್ವಿಯ ಭಾಷಣವನ್ನು ಕೇಳಿ, ಆ ಸುಂದರ ವಿಶಾಲಾಕ್ಷಿಯು ತನ್ನಿಂದ ಅಂತರಿಸುವಳೋ ಏನೋ ಎಂಬ ಭಯದ ಕಲ್ಪನೆಯು ಮಾನಸಿಂಹನಿಗೆ ಬಂದದ್ದರಿಂದ ಅವಳ ಚಿತ್ತಾಕರ್ಷಕ ಸೌಂದರ್ಯವು ಅವನಿಗೆ ಅಧಿಕವಾಗಿ ತೋರಹತ್ತಿತು. ಆ ಸುಂದರಿಯ ಹೃದಯ ಭೇದಕ ಕಣ್ಣಿನ ನೋಟವು, ಧನುಷ್ಯಾಕೃತಿಯ ಸುಂದರವಾದ ಹುಬ್ಬುಗಳು, ಲಜ್ಜಾಯುಕ್ತ-ಚಂಚಲ-ವಿಶಾಲ ತೇಜಃಪುಂಜ ಕಣ್ಣುಗಳು, ಭ್ರಮರಗಳನ್ನು ಸಹ ನಾಚಿಸುವಂಥ ಅತಿಶಯವಾದ ಕಪ್ಪು ಕೂದಲುಗಳು, ಮೃದುಮಧುರ ಹಾಸ್ಯದಿಂದೊಡಗೂಡಿದ ಮುಖಕಾಂತಿಯು ಒಂದೇ ಸಮಯಕ್ಕೆ ನೆನಪಾಗಲು ಆ ಧೀರ-ವೀರ ಕೃತಾಂತಹೃದಯನಾದ ಮಾನಸಿಂಹನು "ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ" ಎಂದು ಭಯದಿಂದ ನಡುಗುತ್ತ "ಸ್ವಾಮಿನ್, ತಾವು ವೃದ್ಧ

ಬ್ರಾಹ್ಮಣರು ಯವ್ವನಾತಿಶಯದಿಂದ ತುಂಬಿ ತುಳುಕುತ್ತಿರುವ ಈ ನಾರೀ ಮಣಿಯನ್ನು ತಗೆದುಕೊಂಡು ಏನು ಮಾಡುವಿರಿ? ಸಾಂಪ್ರತಕ್ಕೆ ದೇಶದಲ್ಲಿ ನಾಲ್ಕೂ ಕಡೆಗೆ ಸುಲಿಗೆ, ದಂಗೆ, ಕಳವು, ಹೊಡೆದಾಟ, ಕೊಲೆ ಮೊದಲಾದ ದ್ರೋಹಗಳು ನಡೆದಿರುತ್ತವೆ. ಇಂಥ ಭಯಂಕರವಾದ ದಿವಸಗಳಲ್ಲಿ ತಮ್ಮ ಪಾಲಕ ಕ್ಷತ್ರಿಯ ಕನ್ಯೆಯು ತಮ್ಮಂಥ ಅಶಕ್ತರೂ ವೃದ್ಧರೂ ಆದವರ ಸಂರಕ್ಷಣದಲ್ಲಿ ಇರುವದಕ್ಕಿಂತ ಅಂಬರಾಧಿಪತಿಯ ಛತ್ರದ ಕೆಳಗೆ ಇರುವದು ಹೆಚ್ಚು ನಿರ್ಭಯವೂ ಹೆಚ್ಚು ಉಚಿತವೂ ಎಂದು ತಮಗೆ ತೋರುವದಿಲ್ಲವೇ? ಅವಳನ್ನು ಬಾದಶಹನ ಜನಾನಖಾನೆಗೆ ಕಳಿಸಿಕೊಡುವದಿಲ್ಲೆಂದು ನಾನು ತಮಗೆ ಆಶ್ವಾಸನ ಕೊಡುತ್ತೇನೆ" ಎಂದು ನುಡಿದನು.

ಸೇನಾಪತಿಯ ಮಾತನ್ನು ಕೇಳಿ ತಪಸ್ವಿಯು ಕೆಲವು ಹೊತ್ತು ಸುಮ್ಮನಾದನು. ಬಳಿಕ ಅವನು ತನ್ನಷ್ಟಕ್ಕೆ ಏನೋ ವಿಚಾರ ಮಾಡತೊಡಗಿದನು. ಆ ಸಮಯಕ್ಕೆ ಅವನ ಮುದ್ರೆಯ ಮೇಲಿಂದ ನೋಡಲು, ಅವನು ಏನೋ ಗೊಂದಲದಲ್ಲಿ ಬಿದ್ದಂತೆ ಕಂಡಿತು. ಸ್ವಲ್ಪ ಹೊತ್ತಿನ ತನಕ ಅವನು ತನ್ನ ಮನಸ್ಸಿನಲ್ಲಿ ವಿಚಾರ ಮಾಡಿ, ಕಡೆಗೆ ಗಂಭೀರ ಮುದ್ರೆಯಿಂದ ಅಂದದ್ದೇನಂದರೆ—"ಮಹಾರಾಜನೇ! ನಾನು ಪ್ರೇಮಪೂರ್ವಕವಾಗಿ ಬೆಳೆಸಿದ ವನಲತೆಯ ಸೌಂದರ್ಯದ ಪರಿಚಯವನ್ನು ಜಗತ್ತಿಗೆ ಮಾಡಿಗೊಡಬಾರದೆಂದು ನನ್ನ ಅಪೇಕ್ಷೆಯಿತ್ತು ಆದರೆ ತಾವು ನನ್ನ ಪಂಚ ಪ್ರಾಣದಂತಿರುವ ಕನ್ಯೆಯ ಪಾಲನವನ್ನು ಮಾಡುವ ಕುರಿತು ವಚನಕೊಡುವದರಿಂದ ನಾನು ನನ್ನ ಕನ್ಯಾರತ್ನವನ್ನು ನಿಮಗೆ ಸಮರ್ಪಿಸಿ ನಿಶ್ಚಿಂತನಾಗುವದು ಉಚಿತವೆಂದು ತೋರುತ್ತದೆ. ಮಹಾರಾಜನೇ! ಈ ಹೊತ್ತು ಶುಭ ದಿವಸವಿರುತ್ತದೆ. ಈಶ್ವರ ಸಾಕ್ಷಿಯಾಗಿಯೂ, ಧರ್ಮಸಾಕ್ಷಿಯಾಗಿಯೂ ನಾನು ನನ್ನ ಮಗಳನ್ನು ನಿಮ್ಮ ಸ್ವಾಧೀನದಲ್ಲಿ ಕೊಡುವೆನು. ತಾವು ಅವಳ ಪಾಣಿಗ್ರಹಣ ಮಾಡಬೇಕು."

ಮಾನಸಿಂಹನು ಇದನ್ನು ಕೇಳಿ ಗಾಬರಿಯಿಂದ ತನ್ನಷ್ಟಕ್ಕೆ "ಪಾಣಿಗ್ರಹಣವು! ಅಸಂಭವದ ಮಾತು! ಹೀಗಾದಲ್ಲಿ ರಾಣಿಯಾದ ಕಮಲಕುಮಾರಿಯು ಎಷ್ಟು ಆಕ್ರೋಶವನ್ನು ಮಂಡಿಸಬಹುದು?" ಎಂದು ಗುಣಗುಟ್ಟುತ್ತ ತಪಸ್ವಿಗೆ—"ತಮ್ಮ ಅಭಿಪ್ರಾಯವು ವಿಚಾರ ಮಾಡಲಿಕ್ಕೆ ಯೋಗ್ಯವಾಗಿರು

ವದು. ಸಾಂಪ್ರತಕ್ಕೆ ನಾನು ಯುದ್ಧದ ಗೊಂದಲದಲ್ಲಿ ತೊಡಗಿರುವೆನು. ಈ ಗೊಂದಲವು ಮುಗಿದ ಬಳಿಕ ನಾನು ರಾಜಧಾನಿಗೆ ಹೋಗಿ ಶಾಂತ ರೀತಿಯಿಂದ ವಿಚಾರ ಮಾಡುವೆನು ತಾವು ನನಗೆ ಆ ಕಾಲಕ್ಕೆ ಬೆಟ್ಟಿಯಾಗುವ ಕೃಪೆಯನ್ನು ಮಾಡಬೇಕು" ಎಂದು ಹೇಳಿದನು.

ಸೇನಾಪತಿಯು ಕೊಟ್ಟ ಉತ್ತರವನ್ನು ಕೇಳಿ ತಪಸ್ವಿಯು ಅತ್ಯಂತ ದುಃಖದಿಂದಲೂ ನಿರಾಶೆಯಿಂದಲೂ ನುಡಿದದ್ದೇನಂದರೆ–"ರಾಜನೇ! ನೀನು ನನ್ನ ಕನ್ಯೆಯನ್ನು ನಿನ್ನ ಅಂತಃಪುರದ ವಿಲಾಸ ದಾಸಿಯರೊಳಗೆ ಸಮಾವೇಶ ಮಾಡಿಕೊಳ್ಳಬೇಕೆಂದು ಇಚ್ಛಿಸುವಿಯಾ? ಹಾಗಾದರೆ ನನ್ನ ನಿರ್ಧನನ ಧನವನ್ನು ಕೊಟ್ಟುಬಿಡು. ನಾನು ತೆಗೆದುಕೊಂಡು ಹೋಗುತ್ತೇನೆ."

ಈ ಪ್ರಕಾರ ತಪಸ್ವಿಯು ನಿಷ್ಠುರವಾಗಿ ಮಾತಾಡಿದ್ದರಿಂದ ಮಾನಸಿಂಹನು ಆ ಲೋಕೋತ್ತರ ಸುಂದರಿಯನ್ನು ತಿರುಗಿ ಕೊಡಲಿಕ್ಕೆ ಒಡಂಬಡಲಾರದೆ ತನ್ನಷ್ಟಕ್ಕೆ "ನಾನು ಕಮಲಕುಮಾರಿಗೆ ಯಾಕೆ ಹೆದರಬೇಕು? ಕ್ಷತ್ರಿಯ ರಾಜರಿಗೆ ಅನೇಕ ಮಂದಿ ರಾಣಿಯರಿರುವದು ವಂಶಪರಂಪರೆಯ ಸಾಂಪ್ರದಾಯವಿರುತ್ತದೆ. ಅಂದಮೇಲೆ ನಾನು ಯಾಕೆ ಈ ಸಾಂಪ್ರದಾಯವನ್ನು ಅನುಸರಿಸಬಾರದು? ನನ್ನ ಸುಖಕ್ಕಾಗಿ–ನನ್ನ ವಿಲಾಸಕ್ಕಾಗಿ ನಾನು ಪಾಣಿಗ್ರಹಣ ಮಾಡುವ ಕೆಲಸದಲ್ಲಿ ಅಡ್ಡಿಯನ್ನು ತೆಗೆದುಕೊಳ್ಳಲಿಕ್ಕೆ ಕಮಲಕುಮಾರಿಗೆ ಏನು ಅಧಿಕಾರವುಂಟು? ನನ್ನ ಸಂತೋಷಭೋಗಕ್ಕೆ ವಿಘ್ನಮಾಡಲು ಕಮಲಕುಮಾರಿಯು ಶಕ್ಯಳೇ?" ಎಂದು ಮನಸ್ಸಿನಲ್ಲಿ ವಿಚಾರ ಮಾಡಿ ತಾನು ಆ ಸುಂದರ ಬಾಲಿಕೆಯನ್ನು ಲಗ್ನ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿದನು.

ಈ ಪ್ರಕಾರ ಮಾನಸಿಂಹನು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿದ ಬಳಿಕ ತಪಸ್ವಿಗೆ–"ಸ್ವಾಮಿವರ್ಯರೇ! ತಮ್ಮ ಆಜ್ಞೆಯು ನನಗೆ ಶಿರಸಾವಂದ್ಯವದೆ. ಆದರೆ ಈ ಲಗ್ನವು ಬಹು ಗುಪ್ತವಾಗಿಯೇ ಆಗತಕ್ಕದ್ದು. ಇದು ಉತ್ಸವ ಮಾಡುವ ಪ್ರಸಂಗವಲ್ಲ. ಹಾಗೂ ಉತ್ಸವಕ್ಕೆ ಯೋಗ್ಯವಾದ ಸ್ಥಳವೂ ಅಲ್ಲ. ನಮ್ಮ ವಿವಾಹಕ್ಕೆ ತಾವೂ ಆ ಸರ್ವಾಂತರ್ಯಾಮಿ ಪರಮೇಶ್ವರನೂ ಮಾತ್ರ ಸಾಕ್ಷಿದಾರರು. ಇನ್ನಾದರೂ ತಮ್ಮ ಅನುಮಾನವು ತೀರಿತೇ?" ಎಂದು ಕೇಳಿದನು.

ತಪಸ್ವಿಯ ನೇತ್ರಗಳು ಆನಂದಾಶ್ರುಗಳಿಂದ ತುಂಬಿಹೋದವು. ಆಗ ಅವನು ಮಾನಸಿಂಹನಿಗೆ ಅಂತಃಕರಣಪೂರ್ವಕವಾಗಿ ಆಶೀರ್ವಾದಗಳ ನ್ನಿತ್ತು ಹೊರಟುಹೋದನು. ಆ ದಿವಸ ಗೋರಜಮುಹೂರ್ತದಲ್ಲಿ ವನ ವಾಸಿನಿಯಾದ ಸುಶೀಲೆಯು ಅಂಬರಾಧಿಪತಿಯ ರಾಣಿಯಾದಳು. ಮಹೇಶನ ಆರಾಧ್ಯದೇವತೆಯೂ ತಪಸ್ವಿಯ ಪಾಲಕಪುತ್ರಿಯೂ ಆದ ಸುಶೀಲೆಯು ಈ ದಿವಸ ಸುದೈವದಿಂದ ಸುಖ–ಐಶ್ವರ್ಯ–ವೈಭವಗಳ ಸಾಮ್ರಾಜ್ಯದಲ್ಲಿ ಪ್ರವಿಷ್ಟಳಾದಳು.

## ಭಾಗ ೭.

### ಸವತಿ ಮತ್ಸರವು.

ಅಂಬರೇಶ್ವರನ ಪಟ್ಟರಾಣಿಯಾದ ಕಮಲಕುಮಾರಿಯು ಅರಮನೆ ಯಲ್ಲಿಯ ಅತ್ಯಂತ ಸುಂದರ ಶುಶೋಭಿತವಾದ ವಿಹಾರ ಮಂದಿರದಲ್ಲಿ ಕುಳಿತು ತನ್ನಷ್ಟಕ್ಕೆ ಗುಣಗುಟ್ಟುತ್ತಿದ್ದಳು. ಅದೇನಂದರೆ:—

**ಜೋ ತು ಧನಿಯಾ ನೇಯಿಯೆ ಚಲಿ ಜಾಯಿಬ್**
**ಜಹರ ಖಾಯೋ ಮರಬೋ ರಾಜಾ ಮೆರಾ–**
**ಲಿಖಿ ಲಿಖಿ ಪತಿಯಾ ಕತಯಿ ಹಮ್ಮ ಭೇಜನ್**
**ಖಬರ ನೇಯಿ ಪೇಯಿನ್ ರಾಜಾ ಮೇರಾ.**

“ಅಯ್ಯಯ್ಯ, ನನ್ನ ಮನಸ್ಸು ಎಷ್ಟು ದುರ್ಬಲವಾಗಿರುತ್ತದೆ! ಪುನಃ ಪುನಃ ಅದೇ ಅರಿಷ್ಟ ಹಾಡನ್ನು ಮನಸ್ಸಿಲ್ಲದಿದ್ದರೂ ಹಾಡಬೇಕೆನ್ನುವಂತೆ ಅನಿಸುತ್ತದೆ! ನನ್ನ ದುರ್ಬಲ ಮನಸ್ಸಿಗೆ ಧಿಕ್ಕಾರವಿರಲಿ! ಹುಚ್ಚಿಯಾದ ನಾನು ವಿಷವನ್ನು ಕುಡಿಯಬೇಕೆಂದು ಯಾಕೆ ನಿಶ್ಚಯಿಸಿದೆನು? ಜೀವ ವನ್ನು ನಾಶಪಡಿಸಿ ದುಃಖದಿಂದ ಮುಕ್ತಳಾಗಲಿಕ್ಕೆ ಯಾಕೆ ಯತ್ನಿಸಿದೆನು? ಯಾವ ಶನೇಶ್ವರಳು ಹೊಸದಾಗಿ ಬಂದಿರುವಳೋ, ಅವಳೇ ಸತ್ತುಹೋಗ ತಕ್ಕದ್ದು. ಅವಳೇ ವಿಷವನ್ನು ಕುಡಿಯತಕ್ಕದ್ದು. ನಾನೇಕೆ ನನ್ನ ಜೀವ

ವನ್ನು ಕಳೆದುಕೊಳ್ಳಲಿ? ಬೇಕಾದರೆ ಅವಳೇ ವಿಷ ಕುಡಿಯಲಿ! ಅವಳೇ ಸಾಯಲಿ!"

ಆಕೆಯ ಸಮೀಪದಲ್ಲಿ ಯಾರೋ ಮಂಜುಳಸ್ವರದಿಂದ "ಬೇಕಾದರೆ ಅವಳೇ ವಿಷ ಕುಡಿಯಲಿ! ಅವಳೇ ಸಾಯಲಿ!" ಎಂದು ಅನ್ನುತ್ತಿದ್ದ ಧ್ವನಿಯು ಕೇಳಿಸಿತು.

ಆ ಕೂಡಲೆ ರಾಣಿ ಕಮಲಕುಮಾರಿಯು ಆಶ್ಚರ್ಯದಿಂದ ನಾಲ್ಕೂ ಕಡೆಗೆ ನೋಡಿದಳು. ಕಿಡಿಕಿಯಲ್ಲಿ ತೂಗಿ ಹಾಕಿದ್ದ ಸುವರ್ಣ ಪಂಜರದೊಳಗಿನ ಗಿಳಿಯು ರಾಣಿಯ ಬಾಯಿಂದ ಹೊರಟ ಕಡೆಯ ಶಬ್ದಗಳನ್ನು ಪ್ರತಿಧ್ವನಿ ಮಾಡಿತು. ಆಗ ರಾಣಿಯು ಕೋಪಾತಿಶಯದಿಂದ ಗಿಳಿಯ ಮೈಮೇಲೆ ತಾನು ಮೆದ್ದ ತಾಂಬೂಲದ ರಸವನ್ನು ಉಗುಳಿ, ಆ ಪಂಜರವನ್ನು ಕಸುವಿನಿಂದ ನೂಕಿಸಿ, ದೊಡ್ಡ ಧ್ವನಿಯಿಂದ "ಎಲಾ ಕೃತಘ್ನಾ, ನಾನು ಇಕ್ಕಿದ ಆಹಾರವನ್ನು ತಿಂದು ಪುಷ್ಟನಾಗಿ ನನ್ನ ಚೇಷ್ಟೆಯನ್ನು ಮಾಡುತ್ತಿಯಾ?" ಎಂದಳು. ಗಿಳಿಯು ರಾಣಿಗೆ ತಿರುಗಿ ಅದೇ ಬೈಗಳನ್ನು ಪ್ರತಿಯಾಗಿ ಆಡಿತು!

ಆಗ ರಾಣಿಯು ತನ್ನ ಎದುರಿಗೆ ಇಟ್ಟಿದ್ದ ಕನ್ನಡಿಯ ಕಡೆಗೆ ಅಕಸ್ಮಿಕವಾಗಿ ನೋಡಲು, ಆ ಮನಮೋಹಿಸಿಯಾದ ಸುಂದರಿಯಂಥ ಇನ್ನೊಬ್ಬ ಲಾವಣ್ಯವತಿಯು ನಿರ್ಲಜ್ಜತನದಿಂದ ತನ್ನ ಹೃದಯಕ್ಕೆ ಕನ್ನಡಿಯನ್ನು ಅವಚಿಕೊಂಡು ರಾಣಿಯ ಉಪಹಾಸ ಮಾಡುತ್ತಾಳೋ ಏನೋ ಅಂಬುವಂತೆ ನಿಂತು ಕೊಂಡಿದ್ದಳು! ರತ್ನಾಲಂಕಾರದಿಂದ ವಿಭೂಷಿತಳಾದ ಆ ಸ್ತ್ರೀಯಳ ಕೇಶಕಲಾಪವು ಅಚ್ಚ ಕರ್ರಗಾಗಿ ಮತ್ತು ಉದ್ದವಾಗಿ ಇದ್ದದರಿಂದಲೂ, ಅವಳ ಕಣ್ಣುಗಳು ಸ್ವಭಾವತಃ ಸುಂದರವಾಗಿದ್ದು ಅವುಗಳಿಗೆ ಗೀರಾದ ಕಾಡಿಗೆಯನ್ನು ಹಚ್ಚಿದ್ದರಿಂದಲೂ, ಅವಳ ಕುತ್ತಿಗೆಯು ಅಮೌಲ್ಯವಾದ ವಜ್ರಾಲಂಕಾರಗಳನ್ನು ಧರಿಸಿ ಅತ್ಯಂತವಾಗಿ ಶೋಭಿಸುತ್ತಿದ್ದದರಿಂದಲೂ, ಅವಳ ಎದೆಯು ಸುಂದರವಾದ ಮುತ್ತಿನ ಸರಗಳನ್ನು ಧರಿಸಿ ಬಹಳ ಉನ್ನತವಾಗಿದ್ದರಿಂದಲೂ, ಅವಳ ಅಂಗಕಾಂತಿಯು ಸುವರ್ಣ ಕೇತಕಿಯಂತೆ ಮನೋಹರವಾಗಿದ್ದರಿಂದಲೂ, ಅವಳು ಸೂಕ್ಷ್ಮವಾದ ಮತ್ತು ಸುಂದರವಾದ ಚಿಳೇ ಜರದ ಶೀರೆಯನ್ನು ಉಟ್ಟು, ಹಸುರು ರೇಶಿಮೆಯ ಕುಪ್ಪಸವನ್ನು

ತೊಟ್ಟದ್ದರಿಂದಲೂ ಆ ಅತಿಸುಂದರ ಮೂರ್ತಿಯನ್ನು ರಾಣಿ ಕಮಲಕುಮಾರಿಯು ಕಂಡು ಬಹಳ ಮತ್ಸರಪಟ್ಟದ್ದಲ್ಲದೆ "ಯಾವ ದುಷ್ಟೆಯು ನನ್ನ ಮಂದಿರದಲ್ಲಿ ಹಾಡು ಹಗಲೇ ಹೊಕ್ಕು ತನ್ನ ಸೌಂದರ್ಯದ ಬಡಿವಾರವನ್ನು ತೋರಿಸಿ ನನ್ನನ್ನು ಅಣಗಿಸುತ್ತಾಳೆ? ಇಕೋ ನೋಡು! ಆ ಸೆಟವಿಯ ಕಣ್ಣಲ್ಲಿ ಈ ನನ್ನ ಉಗುರುಗಳನ್ನು ತಿವಿದು ಈಗಲೇ ಅವಳನ್ನು ಕೊಂದು ಬಿಡುತ್ತೇನೆ." ಎಂದು ಅನ್ನುತ್ತ ಸ್ವಲ್ಪ ಮುಂದಕ್ಕೆ ಸರಿಯಲಾಗಿ ಕನ್ನಡಿಯೊಳಗೆ ಆ ಸ್ತ್ರೀಯಳು ಸಹ ತನ್ನಂತೆಯೇ ಕೋಪದ ಆವಿರ್ಭಾವಗಳನ್ನು ತೋರಿಸಿದ್ದನ್ನು ಕಂಡು ಕಮಲಕುಮಾರಿಯು ಹೆದರಿದಳು. ಆ ಮೇಲೆ ಅವಳು ಸ್ವಲ್ಪಹೊತ್ತು ವಿಚಾರ ಮಾಡಿ ಕನ್ನಡಿಯೊಳಗೆ ಕಂಡ ಸ್ತ್ರೀಯಳು ಬೇರೆ ಯಾರೂ ಇರದೆ ತನ್ನ ಸ್ವಂತ ಪ್ರತಿಬಿಂಬವೆಂದು ಕ್ಷಣಾರ್ಧದಲ್ಲಿ ಮನಗಂಡು ನಕ್ಕಳು! ಆ ಕೂಡಲೆ ಕನ್ನಡಿಯಲ್ಲಿ ದೃಷ್ಟಿಗೆ ಬಿದ್ದ ಸ್ತ್ರೀಯಳ ಮಂದಸ್ಮಿತ ಮುಖದಲ್ಲಿ ನಗೆಯು ಕಂಗೊಳಿಸಿತು! ಇದನ್ನು ನೋಡಿ ರಾಣಿ ಕಮಲಕುಮಾರಿಯು ಹೊಟ್ಟೆಹಿಡಿದುಕೊಂಡು ತಿರುತಿರುಗಿ ನಕ್ಕಳು! ಆ ಮೇಲೆ ಅವಳು ಕನ್ನಡಿಯ ಸಮೀಪಕ್ಕೆ ಹೋಗಿ ತನ್ನಷ್ಟಕ್ಕೆ "ಇಂಥ ನನ್ನ ಸುಂದರರೂಪವೂ ಅದ್ವಿತೀಯ ಭಾಗ್ಯವೂ ಇರಲಾಗಿ ನಾನೇಕೆ ನನ್ನ ಜೀವಕ್ಕೆ ಎರವಾಗಲಿ? ಬೇಕಾದರೆ ಆ ಸವತಿಯೇ ತನ್ನ ಜೀವಕ್ಕೆ ಎರವಾಗಲಿ!" ಎಂದು ನುಡಿದು ಸ್ವಲ್ಪ ಹೊತ್ತು ವಿಚಾರಮಾಡಲಾಗಿ ಪುನಃ ಅವಳ ಮನಸ್ಸಿನಲ್ಲಿ ಹೊಸ ವಿಚಾರಗಳು ಬಂದವು. ಅವು ಯಾವವೆಂದರೆ—"ಆ ನಿರಪರಾಧಿ ಸ್ತ್ರೀಯಳು ನನ್ನದೇನು ಕಸದುಕೊಂಡಿದ್ದಾಳೆ? ನಾನು ಅವಳನ್ನು ಕೊಲ್ಲಬೇಕೆಂದು ಇಚ್ಛಿಸುವದು ಅನ್ಯಾಯವಲ್ಲವೇ? ನಾನೇಕೆ ಅವಳನ್ನು ಕೊಲ್ಲುವದು? ಅವಳಾದರೂ ಏಕೆ ಸಾಯಬೇಕು? ಅವಳು ನನ್ನ ಪಟ್ಟರಾಣಿ ಪದವನ್ನು ಹರಣಮಾಡಿಕೊಂಡಿಲ್ಲ. ಮಹಾರಾಜರಿಗೆ ಅವಳಂತೆ ನೂರಾರು ದಾಸಿಯರುಂಟು. ನಾನೇಕೆ ಆ ಬಡ ಪ್ರಾಣಿಯನ್ನು ನಾಶಮಾಡಬೇಕು?"

ಸ್ವಲ್ಪ ಹೊತ್ತಿನ ತರುವಾಯ ಪುನಃ ರಾಣಿಯ ವಿಚಾರಗಳು ಬದಲಾದವು. "ಆಕೆಯ ನಾಶವನ್ನು ಮಾಡಲೇಬೇಕು. ಆ ಚಾಂಡಾಲೆಯನ್ನು

ಈ ಜಗತ್ತಿನಿಂದ ದೂರಮಾಡುವದು ಅವಶ್ಯವದೆ. ಆ ಮುಂಡೆಯು ನನ್ನ ಪಟ್ಟಮಂಚದ ಮೇಲೆ ಕುಳಿತುಕೊಳ್ಳಲಿಕ್ಕೆ ಬಂದಿರುತ್ತಾಳೆ. ಅವಳು ತಾನು ನಗುತ್ತಾ ಕೆಲೆಯುತ್ತಾ ಇದ್ದು ನನ್ನ ಜೀವಕ್ಕೆ ಉಪದ್ರವ ಕೊಡಲಿಕ್ಕೆ ಬಂದಿರುತ್ತಾಳೆ. ತಾನು ಮಾತ್ರ ಸುಖಸಾಗರದಲ್ಲಿ ಈಸುತ್ತ ಕುಳಿತು ನನ್ನನ್ನು ದುಃಖಸಾಗರದಲ್ಲಿ ಮುಳುಗಿಸಬೇಕೆನ್ನುತ್ತಾಳೆ. ಅಂದಮೇಲೆ ಇಂಥವಳಿಗೆ ದಯವನ್ನು ಯಾಕೆ ತೋರಿಸಬೇಕು? ನಾನು ಹೇಗಾದರೂ ಮಾಡಿ ಅವಳಿಗೆ ವಿಷವನ್ನು ಕುಡಿಸಬೇಕು! ಅವಳು ಸತ್ತ ಹೊರತು ಗತಿ ಇಲ್ಲ! ಗಂಡಸರ ಮನಸ್ಸು ಹೇಗೆ ಆಗುತ್ತದೆಂಬುವದನ್ನು ಯಾರು ನಿಶ್ಚಯದಿಂದ ಹೇಳಬೇಕು? ಅವಳು ತನ್ನ ಲಾವಣ್ಯದ ಬಲದಿಂದ ನನ್ನನ್ನು ಒಂದಿಲ್ಲೊಂದು ದಿವಸ ಸಿಂಹಾಸನದ ಕೆಳಗೆ ಎಳೆದು ಆ ಸ್ಥಳದ ಮೇಲೆ ತಾನು ಹೋಗಿ ಕುಳಿತುಕೊಳ್ಳದೆ ಬಿಡಲಿಕ್ಕಿಲ್ಲ! ಅವಳು ಅತ್ಯಂತ ಸುಂದರಳಿರುವಳು— ನನ್ನಕಿಂತಲು ಸುಂದರಳಿರುವಳು — ಇಲ್ಲದಿದ್ದರೆ ನಾನು ಅವಳ ಉಸಾಬರಿಗೆ ಹೋಗುತ್ತಿದ್ದಿಲ್ಲ. ಹಾಗೂ ಅವಳ ನಾಶದ ಅಪೇಕ್ಷೆಯನ್ನು ಸಹ ಮಾಡುತ್ತಿದ್ದಿಲ್ಲ.

ರಾಣಿಯ ಮಿತ್ರಿಯಾದ ಚಂಪಾವತಿಯು ಬಹಳೊತ್ತನಕ ಬಾಗಿಲದ ಮರೆಗೆ ನಿಂತು, ಈ ಯಾವತ್ತು ಚಮತ್ಕಾರವನ್ನು ನೋಡಿ, ಒಳಗೆ ಬಂದು ನಗುತ್ತ "ರಾಣೀ ಸಾಹೇಬರೇ! ಯಾರು ವಿಷಕುಡಿಯಬೇಕೆಂಬ ಬಗ್ಗೆ ಇಷ್ಟೊಂದು ದೀರ್ಘ ವಿಚಾರವನ್ನು ಮಾಡುವಿರಿ? ಬೇಕಾದರೆ ನಾನು ಅದನ್ನು ಕುಡಿಯುವೆನು! ಆದರೆ ನಾನು ಈ ಹೊತ್ತು ಬಹಳ ಸಂತೋಷದ ವರ್ತಮಾನವನ್ನು ತಂದಿರುತ್ತೇನೆ. ಅದಕ್ಕಾಗಿ ನಿಮ್ಮ ಕಡೆಯಿಂದ ಉಚಿತವಾದ ಇನಾಮು ದೊರೆಯಬೇಕು ಕಂಡಿರಾ!" ಅಂದಳು.

ರಾಣಿಯು ಬೇಕಂತೇ ಸಿಟ್ಟಗೆದ್ದಂತೆ ನಟಿಸಿ "ಖೋಡಿಯೇ! ಇಲ್ಲಿಂದ ಹೊರಟು ಹೋಗು ನೀನು ಇಲ್ಲಿ ಜೀವ ಕೊಡಲಿಕ್ಕೆ ಯಾಕೆ ಬಂದೆಂಬುವದನ್ನು ಮುಂಚೆ ಬಾಯಿಂದ ಬೊಗಳು" ಎಂದು ಕೇಳಿದಳು.

"ವ್ಹಾಃ ನನ್ನ ಇನಾಮನ್ನು ಮುಳುಗಿಸಲಿಕ್ಕೆ ಒಳ್ಳೇ ಯುಕ್ತಿಯನ್ನು ತೆಗೆದಿರಿ! ಮೊದಲು ನನ್ನ ಇನಾಮನ್ನು ಕೊಡುತ್ತೇವೆಂದು

ವಚನಕೊಡಿರಿ ಆ ಮೇಲೆ ನಾನು ತಂದಿರುವ ಸುದ್ದಿಯನ್ನು ಹೇಳು ವೆನು. ಕೇಳಿದಿರಾ! ಒಂದೊಂದು ಶಬ್ದಕ್ಕೆ ಹತ್ತತ್ತು ಮೋಹರುಗಳನ್ನು ತೆಗೆದುಕೊಳ್ಳುವೆನು! ಇದಕ್ಕೆ ನೀವು ಒಡಂಬಟ್ಟರೆ ಆ ಸುದ್ದಿಯನ್ನು ಹೇಳು ವೆನು. ಇಲ್ಲದಿದ್ದರೆ ನಾನು ಈಗ ಇಲ್ಲಿಂದ ಹೊರಟು ಹೋಗುತ್ತೇನೆ ನೋ ಡಿರಿ!" ಹೀಗೆ ನುಡಿದು ಚಂಪಾವತಿಯು ಹೊರಗೆ ಹೋಗುವ ಆವಿರ್ಭಾವ ವನ್ನು ಮಾಡುವಾಗ ಕಮಲಕುಮಾರಿಯು ಆಕೆಯ ಕೈಹಿಡಿದು ಆಕೆಯನ್ನು ತನ್ನ ಹತ್ತರ ಕುಳ್ಳಿರಿಸಿಕೊಂಡು "ಸಖಿಯೇ, ನನ್ನ ಮನಸ್ಸು ಭಯಭೀತವಾ ಗಿರುತ್ತದೆ. ಏನಿದ್ದದ್ದನ್ನು ಹೇಳಿ ಒಮ್ಮೆ ನನ್ನ ಮನಸ್ಸಿನ ದುಗಡನ್ನು ತಪ್ಪಿಸಿಬಿಡು" ಎಂದು ನುಡಿದಳು.

"ನೀವು ವಿಷವನ್ನು ಕುಡಿಯುವದಿಲ್ಲೆಂದು ಮುಂಚೆ ವಚನ ಕೊಡಿರಿ, ಆ ಮೇಲೆ ನಿಮಗೆ ಆ ಸುದ್ದಿಯನ್ನು ಹೇಳುವೆನು."

"ಸಖಿಯೇ, ಈ ಪ್ರಕಾರ ನನ್ನ ಛಲವನ್ನು ಮಾಡಬೇಡ. ನಿನ್ನ ಕೈ ಮುಗಿಯುತ್ತೇನೆ, ಏನಿದ್ದದ್ದನ್ನು ಬೇಗ ಹೇಳು."

"ರಾಣೀಸಾಹೇಬರೇ, ನಿಮಗೆ ಎಳ್ಳಷ್ಟಾದರೂ ಸಮಾಧಾನವಿಲ್ಲ. ಒಂದೇ ಸವನೆ ಅವಸರವನ್ನು ನಡಿಸಿರುವಿರಿ. ಒಡತಿಯೇ, ನಾನು ಈಹೊತ್ತು ಒಂದು ಚಮತ್ಕಾರವನ್ನು ಕಂಡೆನು. ಹೊಸ ರಾಣಿಯವರು ಕಣ್ಣೀರು ಸುರಿಸುವದು ದೃಷ್ಟಿಗೆ ಬಿತ್ತು. ಕ್ಷಣ ಸಹ ತಡಮಾಡದೆ ದಿಲ್ಲಿಗೆ ಹೊರಟು ಬರ ಬೇಕೆಂದು ಬಾದಶಹರ ಕಡೆಯಿಂದ ಒಬ್ಬ ರಾಹುತನು ಮುಂಜಾನೆ ನಿರೂಪ ತೆಗೆದುಕೊಂಡು ಬಂದದ್ದರಿಂದ ಮಹಾರಾಜರು ದಿಲ್ಲಿಗೆ ಹೊರಡುವ ಸಿದ್ಧತೆ ಯನ್ನು ನಡೆಯಿಸಿದ್ದಾರೆ ಆದ್ದರಿಂದ ಹೊಸ ರಾಣಿಯವರು ಮಹಾರಾಜ ರನ್ನು ಅಗಲಿ ಇರಲಾರದೆ ವಿರಹತಾಪದಿಂದ ಬಳಲುತ್ತಲಿದ್ದಾರೆ."

"ಏನಂದಿ? ಇಷ್ಟರಲ್ಲಿಯೇ ಈ ಪ್ರಕಾರವೇ? ಈ ಆಶ್ಚರ್ಯದ ಸುದ್ದಿ ಯನ್ನು ಕೇಳಿ ನನಗಂತೂ ಹೊಟ್ಟೆ ಹಿಡಿಸಲಾರದಷ್ಟು ನಗೆಯು ಬಂದಿರುತ್ತದೆ!"

"ಇದೊಂದು ಸುದ್ದಿಯಾಯಿತು. ಇದರ ಮುಂದಿನ ಸುದ್ದಿಯನ್ನು ಕೇಳಿದರೆ ನಿಮಗೆ ಏನಾಗುವದೋ ನನಗೆ ತಿಳಿಯದು."

"ಅದೇನು? ಹೇಳು ಕೇಳೋಣ."

"ಅದನ್ನು ಕೇಳಿದರೆ ನೀವು ದುಃಖದಿಂದ ಎದೆ ಒಡೆದುಕೊಳ್ಳುವಿರಿ

"ಚಂಪಾವತೀ! ದೈವದಲ್ಲಿದ್ದದ್ದು ಆಗುವದು. ಕಲ್ಲಿನಂತೆ ಕಠಿಣ ಮನಸ್ಸು ಮಾಡಿಕೊಂಡು ಕೇಳಲಿಕ್ಕೆ ನಾನು ಸಿದ್ಧಳಾಗಿರುತ್ತೇನೆ. ಅದೇನೆಂಬುವದನ್ನು ಬೇಗನೆ ಹೇಳು."

"ಅದನ್ನು ಹೇಳಲಿಕ್ಕೆ ನನ್ನ ಮನಸ್ಸು ಒಡಂಬಡಲೊಲ್ಲದು; ಆದರೆ ಹೇಳುವದನ್ನು ಬಿಟ್ಟರೂ ಆಗುವದೇನು? ನಿಮ್ಮ ದೈವವೇ ಕೆಟ್ಟದ್ದು. ಮಹಾರಾಜರು ತಮ್ಮ ಸ್ವಾರಿಯಿಂದ ತಿರುಗಿ ಬಂದ ಕೂಡಲೆ ನಿಮ್ಮ ಹೊಸ ಸವತಿಗೆ ಪಟ್ಟರಾಣಿಯ ಅಭಿಷೇಕವನ್ನು ಮಾಡುವವರಿದ್ದಾರೆ."

"ಈ ವರ್ತಮಾನವು ನಿಜವೇ?"

"ರಾಣೀಸಾಹೇಬರೇ, ಇನ್ನು ಮೇಲೆ ಸಂಶಯವೇತಕ್ಕೆ ಬೇಕು? ಸ್ವತಃ ಮಹಾರಾಜರು ಆಕೆಗೆ ವಚನ ಕೊಟ್ಟದ್ದಾರೆ."

"ನಿನಗೆ ಇದು ಹೇಗೆ ಗೊತ್ತಾಯಿತು?"

"ನಾನು ಈ ನನ್ನ ಕಿವಿಯಿಂದಲೇ ಕೇಳಿರುತ್ತೇನೆ. ಇನ್ನು ಮೇಲೆ ನೀವು ಅಂಬರದ ಸುವರ್ಣಖಚಿತ ರಾಜಮಂದಿರವನ್ನು ತ್ಯಾಗ ಮಾಡಿ ಯಾವದಾದರೊಂದು ಗುಡ್ಡದೊಳಗಿನ ಕೋಟೆಯಲ್ಲಿ ನಿಮ್ಮ ಆಯುಷ್ಯದ ಉಳಿದ ದಿವಸಗಳನ್ನು ಕಳೆಯಬೇಕಾಗುವದು."

ಚಂಪಾವತಿಯ ಬಾಯಿಂದ ಹೊರಟ ಈ ಭಯಂಕರವಾದ ಸುದ್ದಿಯನ್ನು ಕೇಳುತ್ತಲೆ ರಾಣಿಯ ಮಸ್ತಕದ ಮೇಲೆ ವಜ್ರಪ್ರಹಾರ ಮಾಡದಂತಾಯಿತು. ಆ ತೀವ್ರ ಆಘಾತದಿಂದ ಆಕೆಯ ತೇಜೋಮಯವಾದ ನೇತ್ರಗಳು ಅಶ್ರುಗಳಿಂದ ತುಂಬಿಹೋದವು. ರಾಣಿಯು ದುಃಖಿಸುವದನ್ನು ನೋಡಿ ಚಂಪಾವತಿಗೂ ಪರಮಾವಧಿ ವ್ಯಸನವಾಯಿತು ಆದರೂ ಅವಳು ಬೇಕಂತೇ ವಿನೋದಪೂರ್ಣವಾದ ಮುದ್ರೆಯಿಂದ ರಾಣಿಯನ್ನುದ್ದೇಶಿಸಿ ವ್ಯಂಗ್ಯೋಕ್ತಿಯಿಂದ "ಹೊಸ ರಾಣಿಯವರು ವಿರಹದಿಂದ ಅಳುತ್ತಿರುವರು! ಹಳೆ ರಾಣಿಯವರು ನಿರಾಶೆಯಿಂದ ಅಳುತ್ತಿರುವರು! ನಿಮ್ಮಿಬ್ಬರ ದುಃಖವನ್ನು ನೋಡಿ ನನಗೂ ಅಳುವಂತೆ ಆಗಿರುತ್ತದೆ. ನಾನೂ ಈಗ ಸಾಕಸಾಕಾಗುವಷ್ಟು ಅಳುವೆನು!" ಎಂದು ನುಡಿದಳು.

ಚಂಪಾವತಿಯ ಭಾಷಣದ ಉದ್ದೇಶವು ಸಾಧಿಸಿತು. ರಾಣಿಯು ಚಂಪಾವತಿಯ ಭಾಷಣವನ್ನು ಕೇಳಿ ಅತ್ಯಂತ ಸಿಟ್ಟಗೆದ್ದು ಸಮೀಪದಲ್ಲಿ ಎರಡನೇ ವಸ್ತುವು ಏನೂ ಸಿಗದೆ ಇದ್ದದರಿಂದ ಮೇಜಿನ ಮೇಲೆ ನಕ್ಷೆಯುಳ್ಳ ಸುವರ್ಣದ ಚಿಕ್ಕ ಪಾತ್ರೆಯಲ್ಲಿ ದಾಸಿಯು ತಂದು ಇಟ್ಟಿದ್ದ ಒಂದು ಮಧುರ ಸುಗಂಧವಾದ ಗುಲಾಬೀ ಹೂವಿನ ಸುಂದರ ತುರಾಯಿಯನ್ನು ಕೈಯಲ್ಲಿ ತೆಗೆದುಕೊಂಡು ಚಂಪಾವತಿಯ ಮೇಲೆ ಕಸುವಿನಿಂದ ಒಗೆದಳು. ಆಗ ಚಂಪಾವತಿಯು ಮತ್ತಿಷ್ಟು ನಕ್ಕು "ರಾಣೀಸಾಹೇಬರೇ! ಮದನನ ಬಾಣವನ್ನು ಬಡವಿಯಾದ ನನ್ನ ಮೇಲೆ ಯಾಕೆ ಎಸೆಯುತ್ತೀರಿ? ನಾನು ನಿಮ್ಮ ನಮ್ರದಾಸಿಯಾದ ಚಂಪಾವತಿಯು. ನಿಮ್ಮಂತೆ ನಾನೂ ಒಬ್ಬ ಸ್ತ್ರೀಯು. ಮಹಾರಾಜರು ಇಲ್ಲಿ ಬಂದಿಲ್ಲ. ನಿಮ್ಮ ಪ್ರಣಯ ಪ್ರೇಮದ ಮರ್ಮವು ನನಗೇನು ತಿಳಿಯಬೇಕಾಗಿದೆ? ಅಳಬೇಡರಿ. ಮತಿಭ್ರಷ್ಟರಾಗಬೇಡರಿ. ಪ್ರಸಂಗಾವಧಾನವನ್ನು ಹಿಡಿಯಿರಿ. ನೀವು ರಾಜಕನ್ಯೆಯೂ, ರಾಜಪತ್ನಿಯೂ, ರಾಜನ ಪಟ್ಟದ ರಾಣಿಯೂ ಇರುತ್ತೀರಿ. ನಿಮ್ಮನ್ನು ಸರಿಗಟ್ಟುವದು ದರಿದ್ರ ದಾಸಿಗೆ ಹೇಗೆ ಆದೀತು? ನಿಮ್ಮ ಶ್ರೇಷ್ಠ ಅಧಿಕಾರವೂ, ಪದವಿಯೂ, ಯೋಗ್ಯತೆಯೂ ಸಾಮಾನ್ಯಳಾದ ದಾಸಿಗೆ ಹೇಗೆ ಬಂದೀತು? ಅದು ಏನೂ ಇರಲಿ. ನೀವು ಹುಚ್ಚರಂತೆ ಗಾಬರಿಯಾಗದೆ ಸ್ವಲ್ಪ ಸಮಾಧಾನವನ್ನು ತಾಳಿರಿ. ಈ ಚಂಪಾವತಿಯು ಜೀವದಿಂದಿರುವತನಕ ನಿಮಗೆ ಎಂದಾದರೂ ಕಷ್ಟವು ಸಂಭವಿಸೀತೇ? ಇಷ್ಟು ದಿವಸ ನಿಮ್ಮ ಅನ್ನವನ್ನುಂಡು ನಿಮ್ಮ ಅಭಿಮಾನವನ್ನು ನಾನೆಂದಾದರೂ ಮರೆಯಬಹುದೇ? ನೀವು ನಿಶ್ಚಿಂತೆಯಿಂದ ಇರ್ರಿ. ಆ ಚಾಂಡಾಲಿಯ ಮುಳ್ಳನ್ನು ನಿಮ್ಮ ಸುಖದದಾರಿಯೊಳಗಿಂದ ಒಮ್ಮೆ ನಿರಂತರವಾಗಿ ತೆಗೆದುಬಿಡುತ್ತೇನೆ."

"ಅದನ್ನು ನೀನು ಹೇಗೆ ಮಾಡುವಿ?"

"ಹೇಗೆ ಮಾಡುವೆ? ದೇವರು ಆಕೆಯ ನಾಶದ ಸಾಧನವನ್ನು ನನ್ನ ಕೈಯಲ್ಲಿ ಕೊಟ್ಟು ಕಳಿಸಿರುತ್ತಾನೆ" ಹೀಗೆಂದು ಚಂಪಾವತಿಯು ಗಾಬರಿಯಿಂದ ನಾಲ್ಕೂ ದಿಕ್ಕಿಗೆ ನೋಡಿ ಯಾರೂ ಇಲ್ಲದ್ದನ್ನು ಮನವರಿಕೆ ಮಾಡಿಕೊಂಡು ತನ್ನ ಸೆರಗಿನಲ್ಲಿ ಬಚ್ಚಿ ತಂದಿದ್ದ ಪತ್ರವನ್ನು ರಾಣಿಯ ಕೈಯಲ್ಲಿ

ಕೊಟ್ಟಳು. ರಾಣಿಯು ಆ ಪತ್ರವನ್ನು ಓದಿಕೊಂಡ ತರುವಾಯ "ಸಖೀ ಚಂಪಾವತೀ, ನಿನಗೆ ಈ ಪತ್ರವು ಎಲ್ಲಿ ಸಿಕ್ಕಿತು?" ಎಂದು ಅವಸರದಿಂದ ಕೇಳಿದಳು.

"ಅದು ಬೇಕಾದಲ್ಲಿ ಸಿಗಲೊಲ್ಲದೇಕೆ? ಆದರ ಉಸಾಬರಿಯು ನಿಮಗೇತಕ್ಕೆ ಬೇಕು?"

"ಒಳ್ಳೇದು. ಈ ಪತ್ರದ ಉತ್ತರವು ಹೋಯಿತೇನು?"

"ಹೌದು, ಈ ಹೊತ್ತು ಒಂದು ಪ್ರಹರ ರಾತ್ರಿಯಾದ ನಂತರ ರಾಣಿಯವರು ಊರಹೊರಗಿನ ಶಿವಮಂದಿರಕ್ಕೆ ತಮ್ಮ ಮನೋರಮಣನ ದರ್ಶನಕ್ಕಾಗಿ ಹೋಗತಕ್ಕವರಿರುವರು!"

ರಾಣೀ ಕಮಲಕುಮಾರಿಯ ಮುಖವು ಆನಂದದಿಂದ ಉಜ್ವಲವಾಯಿತು ಹೆಂಗಸರಿಗೆ ಸವತಿಯರೆಂದರೆ ಕೇವಲ ಶತ್ರುಗಳು. ಅದರಲ್ಲಿ ವಿಶೇಷವಾಗಿ ರಾಜರಲ್ಲಿಯೂ ಸಂಸ್ಥಾನಿಕರಲ್ಲಿಯೂ ಶ್ರೀಮಂತರಲ್ಲಿಯೂ ಧನಸಂಪತ್ತು, ದಾಸದಾಸಿಯರು, ಐಶ್ವರ್ಯ ವೈಭವಗಳು ವಿಪುಲವಾಗಿರುವದರಿಂದ ಸವತಿಯರು ದುಸ್ಸಹರಾಗುವರು ಆದ್ದರಿಂದ ಕಮಲಕುಮಾರಿಗೆ ತನ್ನ ಸವತಿಯ ನಾಶದ ಸಾಧನವು ದೊರಕಿದ ಕೂಡಲೆ ಆಕೆಯು ಅತ್ಯಂತ ಹರ್ಷಭರಿತಳಾಗಿ ಚಂಪಾವತಿಗೆ "ಚಂಪಾವತೀ! ಈ ಸವತಿಯ ಪರಿಣಾಮವು ಮುಂದೆ ಏನಾಗುವದೆಂಬದರ ಕಲ್ಪನೆಯು ನಿನಗೆ ಬಂದಿರುತ್ತದೋ?" ಎಂದು ಕೇಳಿದಳು.

"ಹೌದು. ಆ ಕಲ್ಪನೆಯು ಬಂದಿರುತ್ತದೆಂತಲೇ ಈ ಕೆಲಸಕ್ಕೆ ಟೊಂಕ ಕಟ್ಟಿಕೊಂಡು ನಿಂತಿರುತ್ತೇನೆ. ಆ ಚಾಂಡಾಲಿಗೆ ಗೃಹತ್ಯಾಗವು ಅಥವಾ ಆಜನ್ಮ ಕಾರಾಗೃಹವು ದೊರಕಲಿಕ್ಕೇ ಬೇಕು!"

"ಇಷ್ಟರಿಂದಲೇ ತೀರುವದೆಂದು ಕಾಣುವದಿಲ್ಲ. ಆಕೆಯ ಜೀವದ ಮೇಲೆ ಪ್ರಸಂಗವು ಸಹ ಬರುವ ಸಂಭವವದೆ. ಅಲ್ಲಿಯ ತನಕ ಬರಗೊಡುವದು ನನಗೆ ಯೋಗ್ಯ ತೋರುವದಿಲ್ಲ. ಏನಾದರೂ ವಿಪರೀತವು ಸಂಭವಿಸಿದರೆ ಅದು ನನ್ನ ಜೀವವನ್ನು ತಿಂದೀತು."

"ರಾಣೀಸಾಹೇಬರೇ! ನೀವು ಎಷ್ಟು ಪುಕ್ಕರು? ನಾನು ಸಣ್ಣವಳಿದ್ದಾಗ್ಗೆ ಜನರು ನನಗೆ ದೆವ್ವಗಳ ಕಥೆಗಳನ್ನು ಹೇಳಿ ಹೆದರಿಸು

ತ್ತಿದ್ದರು. ನಮ್ಮ ಊರ ಸುತ್ತಲು ಒಂದು ದಟ್ಟ ಅಡವಿಯಲ್ಲಿ ಸ್ಮಶಾನ ದೊಳಗೆ ರಾತ್ರಿಯ ಕಾಲಕ್ಕೆ ದೆವ್ವಗಳು ಸಂಚರಿಸುತ್ತವೆಂದು ಅನೇಕ ಜನರ ಬಾಯಿಂದ ಕೇಳಿದ್ದರಿಂದ ನಾನು ಆ ದೆವ್ವಗಳು ಹೇಗಿರುತ್ತ ವೆಂದು ಪ್ರತ್ಯಕ್ಷವಾಗಿ ನೋಡಲಿಕ್ಕೆ ಒಬ್ಬಾಕೆಯೇ ಅನೇಕ ಸಾರೆ ಅಡವಿಯಲ್ಲಿ ಅಡ್ಡಾಡುತ್ತಿದ್ದೆನು ರಾಣಿಯವರೇ, ನಾನು ಚಂಪಾವತಿಯು ಬಲ್ಲಿರಾ! ಸಾಹಸ ಮಾಡದಿದ್ದರೆ ಯಾವ ಕೆಲಸಕ್ಕೂ ಫಲವು ಸಿಗುವದಿಲ್ಲ. ನಿಮ್ಮ ಅನ್ನ ದಿಂದಲೇ ಈ ದೇಹವು ಬೆಳೆದಿರುತ್ತದೆ. ಈ ದೇಹದ ಮೇಲೆ ನಿಮ್ಮದೇ ಅಧಿಕಾರವುಂಟು. ಈ ದೇಹವನ್ನು ನಿಮ್ಮ ಕಾರ್ಯಕ್ಕೆ ಸವಿಸುವದಕ್ಕೆ ಸಿದ್ಧಳಾಗಿರುವೆನು. ನನ್ನ ಜೀವವು ಹೋದರೂ ಹೋಗಲಿ; ನನ್ನ ಸ್ವಾಮಿ ನಿಯ ಕಾರ್ಯಕ್ಕೆ ಜೀವವನ್ನು ಅರ್ಪಿಸುವದರಿಂದ ನನಗೆ ಪುಣ್ಯವು ಲಭಿಸದೆ ಇರಲಾರದು."

"ಚಂಪಾವತೀ! ನೀನು ನನ್ನ ಪ್ರಾಣಮಿತ್ರಿಯು. ನನ್ನ ಕಲ್ಯಾಣಕ್ಕಾಗಿ ನಿನಗೆ ಯೋಗ್ಯಕಂಡದ್ದನ್ನು ಮಾಡು. ನೀನು ಈಹೊತ್ತು ಇಷ್ಟೊಂದು ಮಹತ್ವವಾದ ವರ್ತಮಾನವನ್ನು ತಂದದ್ದಕ್ಕೆ ಈ ಇನಾಮು ತೆಗೆದುಕೋ" ಎಂದುಹೇಳಿ ತನ್ನ ಕೊರಳೊಳಗಿನ ಮುತ್ತಿನ ಹಾರವನ್ನು ತೆಗೆದು ಚಂಪಾ ವತಿಯ ಕೊರಳಲ್ಲಿ ಹಾಕಿದಳು. ಅದರಿಂದ ಚಂಪಾವತಿಯು ಹರ್ಷಿತಳಾಗಿ ನಗನಗುತ್ತ ಅಲ್ಲಿಂದ ಹೊರಟುಹೋದಳು.

# ಭಾಗ ೮.

## ಅಂತಃಪುರದ ಸಂತೋಷವು.

**ಲೋಕೋತ್ತರ** ಸುಂದರಿಯಾದ ಸುಶೀಲೆಯು ತನ್ನ ವಿರಾಮಮಂದಿರ ದಲ್ಲಿ ಈಗೀಗ ಅರಳಿದ್ದ ಜಾಜಿಮಲ್ಲಿಗೆಗಳನ್ನು ತುಂಬಿ ಇಟ್ಟಂಥ ಸುವರ್ಣ ಪಾತ್ರೆಯ ಹತ್ತರ ಉಲ್ಹಾಸದಿಂದ ಕುಳಿತು ಕೌಶಲ್ಯದಿಂದ ಪುಷ್ಪಮಾಲೆ ಯನ್ನು ರಚಿಸುತ್ತಿದ್ದಳು. ಇನ್ನೊಂದು ಸುವರ್ಣಪಾತ್ರೆಯಲ್ಲಿ ಅವಳು ರಚಿಸಿ ಪೂರ್ಣಮಾಡಿದಂಥ ಮತ್ತೊಂದು ಪುಷ್ಪಮಾಲೆಯು ಇಡಲ್ಪಟ್ಟಿತ್ತು.

ಈ ಪುಷ್ಪಗಳ ಮಧುರ ಸುಗಂಧವು ಆ ರಮಣೀಯವಾದ ವಿರಾಮಮಂದಿರದ ನಾಲ್ಕೂ ದಿಕ್ಕುಗಳಲ್ಲಿ ಪಸರಿಸಿತ್ತು. ಪುಷ್ಪಮಾಲೆಯನ್ನು ರಚಿಸುವಾಗ ಸುಶೀಲೆಯ ಕೈಯಲ್ಲಿಯ ವಜ್ರಖಚಿತವಾದ ಕಂಕಣಗಳ ಮಂಜುಳವಾದ ಝಣತ್ಕಾರವು ನಡುನಡುವೆ ಆಗುತ್ತಿತ್ತು. ಸುಶೀಲೆಯ ಸುಂದರವಾದ ಹೆರಳಿನ ಕರೇ ಉಂಗುರಗೂದಲುಗಳು ಮಂದಮಾರುತನ ಸುಳುವಿಗೆ ಆಗಾಗ್ಗೆ ಹಾರುತ್ತಿದ್ದವು. ಸುಶೀಲೆಯ ಕೈಯಲ್ಲಿದ್ದ ಪುಷ್ಪಮಾಲೆಯು ಪೂರ್ಣವಾಗಲಿಕ್ಕೆ ಬಂದಿದ್ದು ಅದು ಈಗ ಅಧಿಕ ಸುಂದರವಾಗಿ ಕಾಣಿಸಲಿಕ್ಕೆ ಹತ್ತಿತ್ತು. ಆ ಮಾಲೆಯ ಸುಂದರ ರೂಪವನ್ನೂ, ಆ ಮಾಲೆಯನ್ನು ಮಾಡುವವಳ ಅಪ್ರತಿಮ ಕೌಶಲ್ಯವನ್ನೂ, ಆ ಮಾಲೆಯನ್ನು ಮಾಡುವವಳೇ ಸ್ವತಃ ನೋಡಿ ಬೆರಗಾಗಿ ಹಲ್ಲಿನಿಂದ ತುಟಿಯನ್ನು ಕಡಿದುಕೊಂಡು ತನ್ನಷ್ಟಕ್ಕೆ ನಗುತ್ತಿದ್ದಳು. ಹಾಗೂ ನಡನಡುವೆ ಶಿರವನ್ನು ಮೇಲಕ್ಕೆ ಎತ್ತಿ ಉತ್ಸುಕತೆಯಿಂದ ತನ್ನ ಪ್ರಾಣವಲ್ಲಭನ ಮಾರ್ಗ ನೋಡುತ್ತ ಬಾಗಿಲದ ಕಡೆಗೆ ದೃಷ್ಟಿಯನ್ನಿಟ್ಟು ಕುಳಿತಿದ್ದಳು. ಇಂಥ ಸಮಯದಲ್ಲಿ ಅಂಬರಾಧಿಪತಿಯಾದ ಮಾನಸಿಂಹನು ಅಲ್ಲಿಗೆ ಬಂದನು.

ಆಗ ಸುಶೀಲೆಯು ಮಧುರಹಾಸ್ಯದಿಂದ ಎದ್ದು ನಿಂತು ಮಾನಸಿಂಹನನ್ನು ಮರ್ಯಾದೆಪೂರ್ವಕವಾಗಿ ಸ್ವಾಗತ ಮಾಡಲಾಗಿ ಅವನು ಅವಳ ಕೈಹಿಡಿದು ಆಸನದ ಮೇಲೆ ಕುಳಿತು “ಸುಶೀಲೇ, ಇಷ್ಟು ಶ್ರಮಬಟ್ಟು ಯಾರಗೋಸ್ಕರ ಈ ಮಾಲೆಯನ್ನು ಮಾಡುತ್ತಿರುವಿ?” ಎಂದು ಪ್ರೇಮದಿಂದ ಕೇಳಿದನು.

“ಪ್ರಾಣನಾಥರಿಗೋಸ್ಕರವಲ್ಲದೆ ಯಾರಗೋಸ್ಕರ ಮಾಡಲಿ?”

“ನಾನು ಯುದ್ಧವ್ಯವಸಾಯಿಯಾದ ಸೇನಾಪತಿಯು. ನನಗೆ ಈ ಮಾಲೆಯ ಮರ್ಮವು ಏನು ತಿಳಿಯುವದು? ಇದಲ್ಲದೆ ನೀನು ಪ್ರೇಮದಿಂದ ಮಾಡಿದ ಈ ಮಾಲೆಯ ಗೌರವವು ನನ್ನ ಕೈಯಿಂದ ಆಗುವದು ಹೇಗೆ?”

“ಭಕ್ತರು ದೇವರಿಗೆ ಹೂವುಗಳನ್ನು ಅರ್ಪಿಸುವಾಗ ಅವು ದೇವರಿಗೆ ಸೇರುತ್ತವೋ ಇಲ್ಲೋ ಎಂಬುವದನ್ನು ವಿಚಾರಮಾಡಿ ಅರ್ಪಿಸುವದಿಲ್ಲ.

ತಮ್ಮ ಚರಣದಾಸಿಯಾದ ನಾನು ಪತಿದೇವರನ್ನು ಪೂಜಿಸುವಾಗ ಅವರಿಗೆ ಅರ್ಪಿಸುವದಕ್ಕಾಗಿ ಈ ಹೂವುಗಳನ್ನು ತಂದಿರುವೆನು. ಪತಿಗಳು ಯುದ್ಧಕ್ಕೆ ಹೊರಟರೆಂದರೆ ಸ್ತ್ರೀಯರು ಅವರ ಕೊರಳಲ್ಲಿ ವಿಜಯಮಾಲೆಯನ್ನು ಹಾಕ ಬೇಕೆಂತಲೂ, ವೀರಪತ್ನಿಯರು ಅರ್ಪಣ ಮಾಡಿದ ಮಾಲೆಯನ್ನು ಕೊರಳಲ್ಲಿ ಹಾಕಿಕೊಂಡು ರಣಭೂಮಿಗೆ ಹೋದ ವೀರರು ಜಯವನ್ನು ಸಂಪಾದಿಸಿಕೊಂಡು ಬರುವರೆಂತಲೂ ನಾನು ಕೇಳಿದ್ದೇನೆ. ಆದ್ದರಿಂದ ನಾನು ಇತ್ತ ಕಡೆಗೆ ಅರ್ಪಿಸಲಿಕ್ಕೆ ಈ ಮಾಲೆಯನ್ನು ಪ್ರೇಮಪೂರ್ವಕವಾಗಿ ಸಿದ್ಧ ಮಾಡಿರುತ್ತೇನೆ."

ರಾಜಾ ಮಾನಸಿಂಹನು ಸುಶೀಲೆಯ ಲೋಕೋತ್ತರವಾದ ಲಾವಣ್ಯದ ಗೋಸ್ಕರ ಮೊದಲೇ ಮುಗ್ಧನಾಗಿದ್ದನು. ಈಗ ಆಕೆಯ ಸರಳಹೃದಯವನ್ನು ಕಂಡು ಹೆಚ್ಚಾಗಿ ಮುಗ್ಧನಾದನು. ಆದ್ದರಿಂದ ಮಾನಸಿಂಹನು ಸುಶೀಲೆಯನ್ನು ಅತ್ಯಂತ ಪ್ರೇಮದಿಂದ ತನ್ನ ಎದೆಗೆ ಅವಚಿಕೊಂಡು ಮುದ್ದಾಡಿ "ಎಲೈ ರಣಕಲ್ಯಾಣಿಯೇ! ಆ ಶಕ್ತಿ ರೂಪಳಾದ ಆದಿಮಾತೆಯು ನಿನ್ನ ಪ್ರಾರ್ಥನೆಯನ್ನು ನಿಶ್ಚಯವಾಗಿ ಮಾನ್ಯ ಮಾಡುವಳು! ಹಾಕು, ಆ ನಿನ್ನ ಮಾಲೆಯನ್ನು ನನ್ನ ಕೊರಳಲ್ಲಿ ಹಾಕು. ನನ್ನ ಅಂತಃಪುರದಲ್ಲಿ ಐವತ್ತು ಮಂದಿ ರಾಣಿಯರಿದ್ದಾರೆ. ಆದರೆ ನಿನ್ನಂತೆ ಒಬ್ಬಳೂ ನನ್ನ ಜಯದಗೋಸ್ಕರ ಆದಿಮಾತೆಯ ಪ್ರಾರ್ಥನೆ ಮಾಡಿದ್ದನ್ನು ಈ ಹೊತ್ತಿನ ವರೆಗೆ ಕಾಣಲಿಲ್ಲ!"

ಆಗ ಸುಶೀಲೆಯು ವಿನಯದಿಂದ ಎದ್ದು ನಿಂತು ಮುಗುಳುನಗೆಯನ್ನು ಬೀರುತ್ತ ಪತಿಯ ಕೊರಳಲ್ಲಿ ಪುಷ್ಪಮಾಲೆಯನ್ನು ಹಾಕಿ ಶೃಂಗಾರ ಲಜ್ಜೆಯಿಂದ ಅವನ ಹತ್ತರ ಬಂದು ಕುಳಿತುಕೊಂಡಳು. ತರುವಾಯ ಮಾನಸಿಂಹನು "ಸುಶೀಲೇ! ಪ್ರಸ್ತುತ ಗದ್ದಲವು ಶಾಂತವಾದ ನಂತರ ನಾನು ದಕ್ಷಿಣಪ್ರಾಂತಕ್ಕೆ ಹೋಗಬೇಕಾಗುವದು. ಅಲ್ಲಿ ಹೋದ ಬಳಿಕ ಮೊದಲಿಗೆ ಗೋವಳಕೊಂಡದ ಮೇಲೆ ಮುತ್ತಿಗೆ ಹಾಕುವೆನು. ಆ ಮೇಲೆ ನನ್ನ ಪ್ರಿಯಳನ್ನು ವಜ್ರವೈಢೂರ್ಯಾದಿ ರತ್ನಗಳಿಂದ ಆಚ್ಛಾದಿಸುವೆನು."

ಅದಕ್ಕೆ ಸುಶೀಲೆಯು "ಮಹಾರಾಜರೇ! ನಾನು ಅರಣ್ಯವಾಸಿಯಾದ ಬಡ ಕ್ಷತ್ರಿಯ ಕನ್ಯೆಯು. ನೀವು ನನನ್ನು ಗೌರವಮಾಡಿ ನನಗೆ ನಿಮ್ಮ

ಹೃದಯದಲ್ಲಿ ಸ್ಥಳವನ್ನು ಕೊಟ್ಟು ರಾಜ್ಞೀಪದದ ಮೇಲೆ ತಂದು ಕುಳ್ಳಿರಿಸಿರುವಿರಿ! ಅಂಬರದ ರಾಜಭಾಂಡಾರದಲ್ಲಿ ರತ್ನಗಳಿಗೆ ಏನು ಕೊರತೆಯದೆ? ದೇವರು ನಿಮ್ಮಂಥ ರತ್ನವನ್ನು ನನಗೆ ಅನುಗ್ರಹಿಸಿರಲು ನಿಮಗಿಂತ ಶ್ರೇಷ್ಠವಾದ ರತ್ನವು ಈ ಜಗತ್ತಿನಲ್ಲಿ ಎರಡನೇದ್ದು ಯಾವದಿರುವದು? ಈ ದಾಸಿಯ ಮೇಲೆ ಇದೇ ಪ್ರಕಾರ ನಿರಂತರವಾಗಿ ಕೃಪಾದೃಷ್ಟಿಯು ಇದ್ದರೆ ಸಾಕು. ನನಗೆ ರತ್ನಗಳಾಗಲಿ ವಜ್ರಗಳಾಗಲಿ ಏನೂ ಬೇಡ!"

ಇದನ್ನು ಕೇಳಿ ಮಹಾರಾಜ ಮಾನಸಿಂಹನು ಅತ್ಯಂತ ಆನಂದಬಟ್ಟನು. ಸುಶೀಲೆಯು ಅಲೌಕಿಕ ಲಾವಣ್ಯವತಿಯು ಮಾತ್ರ ಇರದೆ ದಿವ್ಯಗುಣದ ಖನಿಯು ಇರುತ್ತಾಳೆಂದು ತಿಳಿದು ಅವಳ ವಿಷಯದಲ್ಲಿ ಅವನ ಪ್ರೇಮವು ವೃದ್ಧಿಂಗತವಾಯಿತು. ಅಂತರಂಗದಲ್ಲಿಯೂ ಬಹಿರಂಗದಲ್ಲಿಯೂ ಸುಂದರಳಿದ್ದು ಪ್ರೇಮಹೃದಯಳೂ, ಪ್ರೇಮಲ ಆಚರಣೆಯೂ, ರೂಪಗುಣಸಂಪನ್ನೆಯೂ ಆದ ಸುಶೀಲೆಯು ಮಾನಸಿಂಹನ ಹೃದಯಸ್ವಾಮಿನಿಯಾದದ್ದರಲ್ಲಿ ಆಶ್ಚರ್ಯವೇನು? ಮಾನಸಿಂಹನ ಅಂತಃಪುರದಲ್ಲಿ ಐವತ್ತು ಮಂದಿ ರಾಣಿಯರಿದ್ದರೂ ಅವನ ಪ್ರೇಮಕಾಂಕ್ಷೆಯನ್ನು ಪೂರ್ಣಮಾಡಲಿಕ್ಕೆ ಒಬ್ಬಳೂ ಸಮರ್ಥಳಾಗಿದ್ದಿಲ್ಲ. ಅವರು ಹೆಸರಿಗೆ ರಾಜಪತ್ನಿಯರಾಗಲಿಕ್ಕೆ ಜನ್ಮಿಸಿದಾಗ್ಯೂ ಮಾನಸಿಂಹನ ಮನಸ್ಸನ್ನು ಜಯಿಸಲಿಕ್ಕೆ ಯಾರೂ ಜನ್ಮಿಸಿದ್ದಿಲ್ಲ. ಸುಶೀಲೆಯನ್ನು ನೋಡಿ ಮಾನಸಿಂಹನಿಗೆ ಸ್ವರ್ಗತುಲ್ಯ ಸುಖವಾಯಿತು. ಆಗ ಅವನು ಸುಶೀಲೆಗೆ "ಪಟ್ಟರಾಣಿಯೇ! ಈ ಯುದ್ಧವು ಮುಗಿಯಲಿಕ್ಕೆ ಕೆಲವು ದಿವಸಗಳ ಅವಧಿಯು ಹತ್ತುವದು. ನಾನು ಯಾವತ್ತು ವ್ಯವಸ್ಥೆಯನ್ನು ಮಾಡುವದಕ್ಕೆ ನಾಳೆ ದಿಲ್ಲಿಗೆ ಹೋಗುವೆನು. ಅತ್ತಿಂದತ್ತಲೇ ಯುದ್ಧಕ್ಷೇತ್ರಕ್ಕೆ ಹೋಗಬೇಕಾಗುವದು. ಈಗಂತೂ ನನ್ನದೂ ನಿನ್ನದೂ ಇದೇ ಬೆಟ್ಟಿಯು. ನನಗೆ ಅಪ್ಪಣೆಯನ್ನು ಕೊಡು" ಎಂದನು.

ಮಹಾರಾಜನ ಭಾಷಣವನ್ನು ಕೇಳಿ ಸುಶೀಲೆಯ ಮನಸ್ಸು ಅತ್ಯಂತ ವ್ಯಾಕುಲವಾಯಿತು. ಆಗ ಸುಶೀಲೆಯ ಕಣ್ಣೊಳಗಿಂದ ತಟತಟ ದುಃಖಾಶ್ರುಗಳು ಸುರಿದವು. ಬಾಯಿಂದ ಮಾತುಗಳೇ ಹೊರಬೀಳಲಿಲ್ಲ. ಅವಳು

ಮೂಕಗೊಂಬೆಯಂತೆ ಮಾನಸಿಂಹನ ಮೋರೆಯ ಕಡೆಗೆ ನೋಡುತ್ತ ನಿಂತುಕೊಂಡಳು.

ಕಲ್ಲಿನಂತೆ ಕಠೋರವಾದ ಮನಸುಳ್ಳ ಆ ರಜಪುತ ವೀರನಾದ ಮಾನಸಿಂಹನು ಸುಶೀಲೆಯ ಶೋಕಜನ್ಯವಾದ ಸ್ಥಿತಿಯನ್ನು ಕಂಡು ಬಹಳ ವಿಸ್ಮಯ ಪಟ್ಟನು. ಏನಾದರೂ ಆಗಲಿ, ಕರ್ತವ್ಯವನ್ನು ನೆರವೇರಿಸಲೇ ಬೇಕು ಎಂದು ಕ್ಷಾತ್ರಧರ್ಮದಿಂದ ಬದ್ಧನಾದ ಮಾನಸಿಂಹನು ಸುಶೀಲೆಗೆ ಪ್ರೇಮಾಲಿಂಗನ ಕೊಟ್ಟು ಬಾಯಿಂದ ಏನೂ ಮಾತಾಡದೆ ಮುಂದವಾದ ಹೆಜ್ಜೆಗಳಿಂದ ವಿರಾಮಮಂದಿರದ ಹೊರಗೆ ಬಂದನು ಆದಾಗ್ಯೂ ಸುಶೀಲೆಯ ಶೋಕಾಕುಲ ಮುದ್ರೆಯು ಅವನ ಕಣ್ಣಮುಂದೆ ಕಟ್ಟಿಹೋಗಿತ್ತು. ಸುಶೀಲೆಯ ನಿಸ್ಸೀಮಪ್ರೇಮದಲ್ಲಿ ಮುಳುಗಿಹೋಗಿದ್ದ ಮಾನಸಿಂಹನಿಗೆ ಬೇರೇ ಐವತ್ತು ಮಂದಿ ರಾಣಿಯರ ನೆನಪು ಸಹ ಉಳಿಯಲಿಲ್ಲ. ಅವನು ಹೋಗಹೋಗುತ್ತ "ನನ್ನ ಪ್ರೀಯಳು ಎಷ್ಟು ಮನೋಹರಳು! ಅವಳ ರೂಪವು ಸುಂದರವು, ಅವಳ ಗುಣವು ಸುಂದರವು, ಅವಳ ಭಾಷಣವು ಸುಂದರವು, ಅವಳ ಆನಂದವು ಸುಂದರವು, ಅವಳ ಕೋಪವು ಸುಂದರವು, ಹಾಗೂ ಅವಳ ರೋದನವು ಸಹ ಸುಂದರವು! ಇಷ್ಟು ದಿನಸ ನನಗೆ ನಿಜವಾದ ಪ್ರಿಯಕರ ರಾಣಿಯು ದೊರಕಿದ್ದಿಲ್ಲ. ಈಗ ಮಾತ್ರ ದೊರಕಿದಳು. ಈ ಭೂತಲದಲ್ಲಿ ನನ್ನಂಥ ಧನ್ಯರು ಯಾರಿರುವರು?" ಎಂದು ತನ್ನಷ್ಟಕ್ಕೆ ಅಂದುಕೊಂಡನು.

## ಭಾಗ ೯.

### "ನನಗೆ ಏನೂ ಆಗಬೇಕಾಗಿಲ್ಲ."

ಸುಶೀಲೆಯು ಇಡೀ ದಿವಸವನ್ನು ಬಹಳ ಕಷ್ಟದಿಂದ ಕಳೆದಳು. ಮಹಾರಾಜರು ಹೊರಟುಹೋದ ತರುವಾಯ ಆಕೆಯು ಎಷ್ಟೋ ಹೊತ್ತು ಅಶ್ರುವೃಷ್ಟಿಯನ್ನು ಮಾಡಿ ಹೃದಯದಲ್ಲಿಯ ವಿರಹವ್ಯಥೆಯನ್ನು ಕಿಂಚಿತ್ತು ಶಾಂತಪಡಿಸಿದಳು. ತನಗೆ ಇಷ್ಟು ಯಾಕೆ ವ್ಯಸನವಾಯಿತೆಂಬುವದು ಸ್ವತಃ

ಸುಶೀಲೆಗೆ ಸರಿಯಾಗಿ ತಿಳಿಯಲಿಲ್ಲ. ಇದು ತನ್ನ ಮೇಲೆ ಮುಂದೆ ಏನಾದರೂ ಸಂಕಟವು ಬಂದೊದಗುವ ದುಶ್ಚಿಹ್ನವೋ ಏನೋ ಎಂದು ತಿಳಕೊಂಡು ಸುಶೀಲೆಯು ಗಾಬರಿಯಾದಳು. ವಿರಹದುಃಖವು, ನಿರಾಶೆಯು, ನಾನಾವಿಧವಾದ ಸಂಶಯಗಳು ಮತ್ತು ಅಪಶಕುನಗಳು ಆ ಬಾಲಿಕೆಯನ್ನು ಹೌಹಾರಿಸಿ ಬಿಟ್ಟವು. ಸುಶೀಲೆಯು ಮಹದೈಶ್ವರ್ಯಸಂಪನ್ನನೂ, ಸತ್ತ್ವಾಧೀಶನೂ, ಕೀರ್ತಿವಂತನೂ, ಪ್ರತಾಪಶಾಲಿಯೂ ಆದ ರಾಜಾವಮಾನಸಿಂಹನ ಪಟ್ಟರಾಣಿಯಾದ್ದರಿಂದ ನಿರ್ಧನನಾದ ಮಹೇಶನನ್ನು ಮರೆಯುವದು ಸ್ವಾಭಾವಿಕವೇ. ಸುಶೀಲೆಯು ಸಚ್ಛೀಲ ಹಿಂದೂ ಬಾಲಿಕೆಯೂ, ಸರ್ವಸಂಪನ್ನಳೂ, ಬಲಿಷ್ಠ ಕ್ಷತ್ರಿಯ ರಾಜನ ಧರ್ಮಪತ್ನಿಯೂ, ಪತಿವ್ರತಾ ಹಿಂದೂ ಸ್ತ್ರೀಯೂ ಇರುವದರಿಂದ ಅವಳು ಈಗ ಪತಿಯು ಹೊರತಾಗಿ ಅನ್ಯಪುರಷನನ್ನು ನೆನಿಸುವದು ಶಕ್ಯವಲ್ಲಿ? ಅವಳಿಗೆ ಅಂಬರ ರಾಜ್ಯದ ಐಶ್ವರ್ಯದ ಅಭಿಲಾಷೆಯಾಗಲಿ, ವಸ್ತ್ರಾಲಂಕಾರ ವೈಭವ ಅಧಿಕಾರಗಳ ಅಭಿಲಾಷೆಯಾಗಲಿ ಇದ್ದಿಲ್ಲ. ಸ್ತ್ರೀಯರಿಗೆ ಮುಖ್ಯ ಕರ್ತವ್ಯವಾದ ಪತಿ ಸೇವೆಯನ್ನು ಮನಃಪೂರ್ವಕವಾಗಿ ಮಾಡಬೇಕೆಂಬುವದೇ ಅವಳ ಉತ್ಕಟೇಚ್ಛೆಯು ಇತ್ತು. ಅವಳು ವನದಲ್ಲಿ ತಪಸ್ವಿಗಳ ಆಶ್ರಮದೊಳಗೆ ಇರುವಾಗ್ಗೆ ತನ್ನ ಪಿತನ ಬಾಯಿಂದ ಸೀತಾ, ದಮಯಂತಿ, ಸಾವಿತ್ರಿ ಮೊದಲಾದ ಪುಣ್ಯಶೀಲ ಸತಿಯರ ಚರಿತ್ರಗಳನ್ನು ಕೇಳಿದ್ದಳು. ಆ ಚರಿತ್ರಗಳ ನೆನಪು ಅವಳ ಅಂತರಂಗದಲ್ಲಿ ಅಹೋರಾತ್ರಿ ಜಾಗ್ರತವಿತ್ತು. ಹಾಗೂ ಇದರಿಂದ ಅವಳು ತನ್ನ ಹೃದಯದ ದುರ್ಬಲತೆಯನ್ನು ಮುರಿದು ತನ್ನ ಬಾಲ್ಯ ಸಖನಾದ ಮಹೇಶನನ್ನು ಮರೆಯಲಿಕ್ಕೆ ಪ್ರಯತ್ನವನ್ನು ನಡೆಸಿದ್ದಳು. ಅವಳ ಪ್ರಯತ್ನವು ಸಫಲವಾಗಿತ್ತೋ ಇಲ್ಲೋ ಎಂಬುವದನ್ನು ಯಾರು ಹೇಳಲು ಸಮರ್ಥರು?

ಇಡೀ ದಿವಸ ವಿರಾಮಮಂದಿರದ ಬಾಗಿಲವು ಮುಚ್ಚಿತ್ತು. ಸಾಯಂಕಾಲದ ಸುಮಾರಕ್ಕೆ ಹೊಸ ರಾಣಿಯು ಮಂದಿರದಿಂದ ಹೊರಬಿದ್ದಳು. ಮಹಾರಾಣೀ ಕಮಲಕುಮಾರಿಯು ಮಂದಿರಕ್ಕೆ ಹೋಗಿ ಅವಳಿಗೆ ಬೆಟ್ಟಿಯಾಗಿ ಬರಬೇಕೆಂಬ ವಿಚಾರವು ಅವಳ ಮನಸ್ಸಿನಲ್ಲಿ ಬಂತು. ಆದರೆ

ಕೂಡಲೆ ಅವಳು ಆ ವಿಚಾರವನ್ನು ತಿರುಗಿಸಿ ಅರಮನೆಯ ಉದ್ಯಾನಕ್ಕೆ ಹೋದಳು. ಈ ಉದ್ಯಾನವನ್ನು ಸುಂದರವಾಗಿಯೂ ಮನೋಲ್ಹಾದ ಕರವಾಗಿಯೂ ಮಾಡಬೇಕೆಂಬ ಹಂಬಲದಿಂದ ಮಾನಸಿಂಹನು ಇದಕ್ಕೆ ಹೇರಳವಾದ ದುಡ್ಡನ್ನು ವೆಚ್ಚ ಮಾಡಿದ್ದನು. ತೋಟದಲ್ಲಿ ಸಪಾಟನೆಲದ ಮೇಲೆ ಯಾವತ್ತು ಕಡೆಗೆ ಹಚ್ಚ-ಹಸರು ಗಾಲೀಚೆಗಳನ್ನು ಪಸರಿಸಿ ನಡ ನಡುವೆ ನಸುಗೆಂಪಿನ ಸಣ್ಣ ಹರಳುಗಳನ್ನು ಸುರುವಿ ಕಾಲದಾರಿಗಳನ್ನು ಮಾಡಿದ್ದನು. ಆ ಕಾಲದಾರಿಯ ಎರಡೂ ಮಗ್ಗಲಿಗೆ ಜಾಜಿಮಲ್ಲಿಗಿ, ಸೂಜಿಮಲ್ಲಿಗಿ, ದುಂಡಮಲ್ಲಿಗಿ, ಚಂಪಮಲ್ಲಿಗಿ, ಕದರಮಲ್ಲಿಗಿ, ಸಂಪಗಿ, ಗುಲಾಬಿ, ಬಕುಲ, ನಾಗಕೇಶರ ಮೊದಲಾದ ಸುವಾಸಿಕ ಹೂವಿನ ಗಿಡ ಗಳನ್ನು ವ್ಯವಸ್ಥೆಯಿಂದ ಹಚ್ಚಿಸಿದ್ದನು. ಅಲ್ಲಲ್ಲಿ ಲತಾಕುಂಜಗಳನ್ನೂ ಲತಾ ಮಂಟಪಗಳನ್ನೂ ಮಾಡಿ ಅವುಗಳ ಮಧ್ಯದಲ್ಲಿ ವಿಶ್ರಾಂತಿಗೈಯ್ಯಲಿಕ್ಕೆ ಕುಳಿತು ಕೊಳ್ಳುವದಕ್ಕಾಗಿ ಸ್ಫಟಿಕದಂತೆ ಶುಭ್ರವಾದ ಸಂಗಮರವರಿ ಕಲ್ಲಿನ ಆಸನ ಗಳನ್ನು ಮಾಡಿಸಿದ್ದನು. ಅವುಗಳ ಹತ್ತರವೇ ಒಂದು ಸುಂದರವಾದ ಕಾರಂಜಿಯು ಪುಟಿಯುತ್ತಿತ್ತು. ಈ ಕಾರಂಜಿಯ ಚಿತ್ರವಿಚಿತ್ರ ಮುಖ ಗಳಿಂದ ವಿಧವಿಧವಾದ ಬಣ್ಣದ ಜಲತುಷಾರಗಳು ಕಸುವಿನಿಂದ ಪುಟಿದು ಅವು ಒಂದಕ್ಕೊಂದು ಕೂಡಿ ನಾಲ್ಕೂ ದಿಕ್ಕುಗಳಲ್ಲಿ ಬೀಳುತ್ತಿದ್ದವು. ಅದ ರಿಂದ ಮುತ್ತುಗಳು ಸುರಿಯುತ್ತವೋ ಏನೋ ಎಂಬುವಂತೆ ಈ ತುಷಾರ ಗಳು ಪಸರಿಸಿ ಭೂಮಿಯ ಮೇಲೂ ಲತಾಕುಂಜಗಳ ಮೇಲೂ ಬೀಳುತ್ತಿದ್ದವು. ಈ ಲತಾಮಂಟಪದಲ್ಲಿ ವಿಶ್ರಾಂತಿಗೈಯಲಿಕ್ಕೆ ಕುಳಿತುಕೊಳ್ಳುವವರ ಮೈಗೆ ಸ್ಪರ್ಶವಾಗುವ ಶೀತಲವಾದ ಜಲತುಷಾರಗಳಿಂದಲೂ ಮಂದಮಾರುತನ ಸುಳುವಿನಿಂದ ಸುತ್ತಲಿನ ಪುಷ್ಪ-ಲತಾ ವೃಕ್ಷಗಳಲ್ಲಿ ಉಂಟಾದ ಸುಗಂಧಿತ ಪುಷ್ಪಪರಾಗದ ಮಿಶ್ರಣದಿಂದಲೂ ಈ ತಾಪಹಾರಕ ರಮಣೀಯವಾದ ಉದ್ಯಾನದಲ್ಲಿ ಪ್ರವೇಶಮಾಡಿದ ಕೂಡಲೆ ಸುಶೀಲೆಯ ಶೋಕಾಕುಲವಾದ ಹೃದಯವು ಕಿಂಚಿತ್ತು ಪ್ರಫುಲ್ಲಿತವಾಯಿತು. ಸುಶೀಲೆಯು ಒಂದು ಲತಾ ಮಂಟಪದಲ್ಲಿ ಸಂಗಮರವರಿ ಆಸನದ ಮೇಲೆ ಎದುರಿಗಿನ ಕಾರಂಜಿಯೊಳ ಗಿಂದ ಹಾರುವ ಜಲತುಷಾರಗಳ ಕ್ರೀಡೆಯನ್ನು ನೋಡುತ್ತ ಆನಂದಮಗ್ನ

ಳಾಗಿ ಕುಳಿತಿದ್ದಳು. ಇಷ್ಟರಲ್ಲಿ ಯಾರೋ ಒಬ್ಬರು “ರಾಣೀಸಾಹೇಬರೇ!” ಎಂದು ಕೂಗಿದ ಸಪ್ಪಳವು ಅವಳ ಕಿವಿಗೆ ಬಿತ್ತು. ಆಗ ಸುಶೀಲೆಯು ಹಿಂದಿರುಗಿ ನೋಡಲಾಗಿ ಚಂಪಾವತಿಯು ಹಾಸ್ಯಮುಖದಿಂದ ಅಲ್ಲಿ ನಿಂತದ್ದನ್ನು ಕಂಡಳು. ಚಂಪಾವತಿಯು ಚತುರೆಯೂ, ಮಧುರಭಾಷಿಣಿಯೂ ಇದ್ದದರಿಂದ ಅವಳ ಮೇಲೆ ಸುಶೀಲೆಯ ಪ್ರೇಮವು ವಿಶೇಷವಿತ್ತು. ಆದ್ದರಿಂದ ಸುಶೀಲೆಯು ನಗನಗುತ್ತ ಚಂಪಾವತಿಗೆ “ಯಾಕೆ ಬಂದಿ?” ಎಂದು ಕೇಳಿದಳು.

“ರಾಣೀಸಾಹೇಬರು ನನ್ನನ್ನು ನೆನಿಸಿದ್ದರಿಂದ ನಾನು ಸೇವೆಯನ್ನು ಮಾಡುವುದಕ್ಕಾಗಿ ಬಂದಿರುತ್ತೇನೆ.”

“ಹೌದು ನಿಜವು. ನಿನ್ನ ಹತ್ತರ ಸ್ವಲ್ಪ ಕೆಲಸವುಂಟು, ಅದನ್ನು ಮಾಡುವಿಯಾ?”

“ರಾಣೀಸಾಹೇಬರೇ. ಇಷ್ಟೆಲ್ಲ ಶಿಷ್ಟಾಚಾರವೇತಕ್ಕೆ ಬೇಕು? ನಾನು ನಿಮ್ಮ ನಮ್ರದಾಸಿಯು. ನಾನು ಯಾವಾಗಲು ನಿಮ್ಮ ಅಪ್ಪಣೆಯ ಅಧೀನದಲ್ಲಿರುವವಳು ನಿಮ್ಮ ಅಪ್ಪಣೆಯಂತೆ ನಡೆದುಕೊಳ್ಳಲಿಕ್ಕೆ ನಾನು ತಲೆಬಾಗಿ ಸಿದ್ಧಳಿರುತ್ತೇನೆ.”

“ಛೀ ಛೀ ಸಖಿಯೇ, ಈ ಪ್ರಕಾರ ದೈನ್ಯದಿಂದ ಮಾತಾಡಬೇಡ. ಪರಮೇಶ್ವರನ ರಾಜ್ಯದಲ್ಲಿ ಎಲ್ಲರೂ ಸರಿಸಮಾನಸ್ಥರು. ನಾನು ಅರಣ್ಯದಲ್ಲಿ ಪರ್ಣಕುಟಿಯೊಳಗೆ ವಾಸಿಸುವವಳು. ಈಶ್ವರನ ಕೃಪೆಯಿಂದ ರಾಜಪತ್ನಿಯಾಗಿರುತ್ತೇನೆ. ಅದೃಷ್ಟವು ತಿರುಗಿತೆಂದರೆ ನಾನು ತಿರುಕಳಾಗಿ ಓಣಿಯಲ್ಲಿ ತಿರುಗಬೇಕಾಗುವದು. ಅಂದಮೇಲೆ ಉಚ್ಚನೀಚ ಭಾವವು ಎಲ್ಲಿಯದು? ನಾನಂತೂ ನಿನ್ನನ್ನು ಮಿತ್ರಿಯಂತೆಯೂ ಬೆನ್ನಿಲೆಬಿದ್ದ ತಂಗಿಯಂತೆಯೂ ತಿಳಿದಿರುವೆನು!”

ಎಷ್ಟಾದರೂ ಚಂಪಾವತಿಯು ಮನುಷ್ಯಳೇ. ಅವಳ ಹೃದಯವು ಮನುಷ್ಯರದಿತ್ತು. ಪಾಷಾಣದ್ದು ಇದ್ದಿಲ್ಲ. ಆದ್ದರಿಂದ ಅವಳು ಸುಶೀಲೆಯ ಸರಳಹೃದಯವನ್ನು ಕಂಡು ಗೊಂದಲದಲ್ಲಿ ಬಿದ್ದಳು. ಅವಳು ತನ್ನ ಮನಸ್ಸಿನಲ್ಲಿ “ಅಯ್ಯೋ, ಪಾಪ! ಈ ಸರಳ ಸ್ವಭಾವದ ದೇವಕನ್ನಿಕೆ

ಯನ್ನು ನಾಶಮಾಡುವದು ನನ್ನ ಕೈಯಿಂದ ಹೇಗೆ ಆದೀತು?" ಎಂದು ನುಡಿದಳು.

ಸುಶೀಲೆಯು ರಾಜಾಮಾನಸಿಂಹನ ಅಂತಃಪುರದಲ್ಲಿ ಪ್ರವೇಶಮಾಡಿದಾರಭ್ಯ ಅವಳದೂ ಚಂಪಾವತಿಯದೂ ಸ್ನೇಹವು ಕೂಡಿತ್ತು. ಚಂಪಾವತಿಯು ಸುಶೀಲೆಯ ಹತ್ತರ ಹಗಲಿರುಳು ಇದ್ದುಕೊಂಡು ಅವಳ ಪ್ರತಿಯೊಂದು ಕೆಲಸವನ್ನು ಉತ್ಸುಕತೆಯಿಂದ ಮಾಡುತ್ತಿದ್ದಳು. ಆದದರಿಂದ ಅವಳಲ್ಲಿ ಸುಶೀಲೆಯ ಪ್ರೇಮವೂ, ವಿಶ್ವಾಸವೂ ನಟ್ಟಿದ್ದವು. ಚಂಪಾವತಿಯು ಪಟ್ಟದ ರಾಣಿಯಾದ ಕಮಲಕುಮಾರಿಯ ಪ್ರಿಯಸಖಿಯು ಇದ್ದಾಗ್ಯೂ ಅವಳು ಉಳಿದ ರಾಣಿಯರ ಕಡೆಗೆ ಯಾವಾಗಲೂ ಹೋಗಿ ಬರುತ್ತಿದ್ದಳು. ಸುಶೀಲೆಯ ಮಂದಿರದೊಳಗಿನ ಸಂಗತಿಗಳನ್ನು ಯಾವತ್ತೂ ತಿಳಿದುಕೊಳ್ಳುವದಕ್ಕಾಗಿ ಮಹಾರಾಣಿ ಕಮಲಕುಮಾರಿಯು ಚಂಪಾವತಿಯನ್ನು ಬೇಕಂತೇ ಯೋಜಿಸಿರುವಳೆಂದು ಮಿಕ್ಕ ರಾಣಿಯರು ತಿಳಿದುಕೊಂಡಿದ್ದರು. ಹಾಗೂ ಈ ಪ್ರಕಾರವಾಗಿ ತಮ್ಮ ತಮ್ಮೊಳಗೆ ಬಹಿರಂಗವಾಗಿ ಮಾತಾಡುತ್ತಿದ್ದರು. ಈ ಅವರ ಅನುಮಾನವು ನಿಜವಿರಲಿ, ಅಥವಾ ಇಲ್ಲದಿರಲಿ, ಸುಶೀಲೆಯ ಪ್ರೀತಿಯೂ, ವಿಶ್ವಾಸವೂ ಚಂಪೆಯಲ್ಲಿ ಪೂರ್ಣವಾಗಿ ನಟ್ಟಿದ್ದವೆಂಬುವದರಲ್ಲಿ ಸಂದೇಹವಿಲ್ಲ.

ಆ ದಿವಸ ಮುಂಜಾನೆ ಒಬ್ಬ ವೃದ್ಧಸ್ತ್ರೀಯು ಸುಶೀಲೆಯ ಹೆಸರಿನ ಒಂದು ಪತ್ರವನ್ನು ಸುಶೀಲೆಯ ಅಂತಃಪುರಕ್ಕೆ ತೆಗೆದುಕೊಂಡು ಬಂದಿದ್ದಳು. ಅದನ್ನು ಆ ದುಷ್ಟ ಚಂಪಾವತಿಯು ಗುಪ್ತವಾಗಿ ಒಡೆದು ಓದಿ ನೋಡಿದ್ದಳು. ಆ ಪತ್ರದಲ್ಲಿ ಸಾಂಕೇತಿಕ ಭಾಷೆಯಿಂದ "ಪಿತನ ಆಶ್ರಮದಲ್ಲಿಯ ದರಿದ್ರಿಯಾದ ಬ್ರಾಹ್ಮಣ ಕುಮಾರನು ಜನ್ಮದ ನಿರೂಪವನ್ನು ತೆಗೆದುಕೊಳ್ಳಲು ಬಯಸುತ್ತಾನೆ. ಪ್ರಹರ ರಾತ್ರಿಯ ತರುವಾಯ ಊರಹೊರಗಿನ ಶಿವ ಮಂದಿರಕ್ಕೆ ಬರಬೇಕು" ಎಂದು ಬರೆದಿತ್ತು.

ಈ ಪತ್ರದಲ್ಲಿ ಯಾವದೊಂದು ವಿಪರೀತ ಸಂಗತಿಯು ಇದ್ದಿಲ್ಲ. ಇದಲ್ಲದೆ ಆ ಪತ್ರದ ಉತ್ತರವಾದರೂ ಚಂಪಾವತಿಯ ಮುಖಾಂತರ ಹೋಗಿತ್ತು, ಹೀಗಿದ್ದು ಹೊಸ ರಾಣಿಯವರ ಜೀವನ ವೃತ್ತಾಂತದಲ್ಲಿಯ ಅದ್ಭುತರಹಸ್ಯ

ವನ್ನು ತಿಳುಕೊಳ್ಳುವದಕ್ಕಾಗಿ ಚಂಪಾವತಿಯು ಬಹಳ ಚಡಪಡಿಸಿದಳು. ಆಕೆಗೆ ಅದನ್ನು ತಿಳುಕೊಳ್ಳದೆ ಸಮಾಧಾನವಾಗಲೊಲ್ಲದು. ಆದ್ದರಿಂದ ಸುಶೀಲೆಯ ಅಪ್ಪಣೆಯನ್ನು ಪಡೆದುಕೊಂಡು ಚಂಪಾವತಿಯು ಆ ವೃದ್ಧ ಸ್ತ್ರೀಯ ಸಂಗಡ ಮಹೇಶನ ಕಡೆಗೆ ಹೋದಳು. ಅಲ್ಲಿ ಅವಳು ಮಹೇಶನ ಅದ್ವಿತೀಯ ಸೌಂದರ್ಯವನ್ನು ನೋಡಿ ಆಶ್ಚರ್ಯಚಕಿತಳಾಗಿ ಅವನಿಗೆ "ರಾಣೀಸಾಹೇಬರು ರಾತ್ರಿಯ ಕಾಲದಲ್ಲಿ ಶಿವಮಂದಿರಕ್ಕೆ ಬರಲು ಒಡಂಬಟ್ಟಿದ್ದಾರೆ" ಎಂದು ನಿರೂಪವನ್ನು ತಿಳಿಸಿದಳು. ಹಾಗೂ ಕೆಲವು ಹೊತ್ತಿನ ತರುವಾಯ ಅವನ ಮನಸ್ಸಿನ ಇಂಗಿತವನ್ನು ತಿಳುಕೊಳ್ಳುವದಕ್ಕಾಗಿ "ರಾಣೀಸಾಹೇಬರು ಒಪ್ಪಿಕೊಂಡ ಪ್ರಕಾರ ಈ ಹೊತ್ತು ರಾತ್ರಿ ಬರಬಹುದು. ಆದರೆ ಅವರು ಪಟ್ಟರಾಣಿಯಾಗಿರುವದರಿಂದ ಮೇಲಿಂದ ಮೇಲೆ ಈಪ್ರಕಾರ ಏಕಾಂತದಲ್ಲಿ ಬೆಟ್ಟಿಯಾಗುವದೆಂದರೆ ಅವರಿಗೆ ಪ್ರಾಣಸಂಕಟವಾಗುವದು ಅಂಬರದ ರಾಣಿಯವರ ಉಗುರುಗಳು ಸಹ ಸೂರ್ಯನ ದೃಷ್ಟಿಗೆ ಬೀಳುವದು ಸೂರ್ಯನ ಹಣೇಬರಹದಲ್ಲಿ ಬರೆದಿಲ್ಲ. ಇದು ತಮಗೆ ಗೊತ್ತಿರಬಹುದು. ಒಳ್ಳೇದು, ತಾವು ಯಾರು?" ಎಂದು ಚಂಪಾವತಿಯು ಕೇಳಿದಳು.

ಚಂಪಾವತಿಯು ಮಾಡಿದ ಪ್ರಶ್ನೆಗೆ ಬ್ರಾಹ್ಮಣ ಕುಮಾರನು ಉತ್ತರ ಕೊಡದೆ ಉಸುರುಗಳೆದು "ನನ್ನ ಬೆಟ್ಟಿಯನ್ನು ತೆಗೆದುಕೊಳ್ಳುವದು ಇಷ್ಟು ಕಷ್ಟದಾಯಕವಾಗಿದ್ದರೆ ಅವಳು ಹಾಗೆ ಮಾಡುವ ಕಾರಣವಿಲ್ಲ" ಎಂದು ಮರ್ಮಭೇದಕವಾಗಿ ಉತ್ತರಕೊಟ್ಟನು.

ಆದರೆ ಚಂಪಾವತಿಯು ಬಹಳ ದುಷ್ಟೆಯು. ಅವಳು ಪುನಃ ಮಹೇಶನಿಗೆ "ನಾನು ಹೇಳಿದ್ದು ರಾಣೀಸಾಹೇಬರ ನುಡಿಯಲ್ಲ. ದಯಮಾಡಿ ನೀವು ವಿಪರೀತವಾಗಿ ತಿಳುಕೊಳ್ಳಬಾರದು. ನನಗೆ ಸ್ವತಃ ತಿಳಿದದ್ದನ್ನು ನಾನು ಆಡಿದೆನು. ಅಂಬರದ ರಾಣಿಯವರಿಗೆ ಆಗಾಗ್ಗೆ ದೇವದರ್ಶನಕ್ಕೆ ಹೋಗುವ ರೂಢಿಯುಂಟು ನಿಮಗೆ ಅವರು ಮೇಲಿಂದಮೇಲೆ ಬೆಟ್ಟಿಯಾಗಬಹುದು. ತಾವು ಬಂದಿರುತ್ತೀರೆಂದು ತಿಳಿದ ಕೂಡಲೆ ಅವರು ಭ್ರಮಿಷ್ಟರಂತೆ ಆಗಿರುವರು ಅವರು ಯಾವಾಗ್ಗೆ ರಾತ್ರಿಯಾದೀತು, ಹಾಗೂ ಯಾವಾಗ್ಗೆ ನಿಮ್ಮ ಬೆಟ್ಟಿಯ ಲಾಭವು ದೊರಕೀತು ಎಂದು ಆತುರರಾಗಿರುತ್ತಾರೆ.

ತಾವು ಅಗತ್ಯವಾಗಿ ಇಲ್ಲಿ ಬಂದು ಕುಳಿತುಕೊಳ್ಳಬೇಕು." ಎಂಬು ಕೈ ಗಂಟು ಕೂಡಿಸಿ ಕುಚೋದ್ಯತನದಿಂದ ಮಾತಾಡಿದಳು.

ಬ್ರಾಹ್ಮಣ ಕುಮಾರನ ಕಣ್ಣೊಳಗಿನ ನೀರು ಇನ್ನೂ ಒಣಗಿದ್ದಿಲ್ಲ. ಅವನು ಬೆನ್ನು ತಿರುವಿ ಏನೂ ಮಾತಾಡದೆ ಹೊರಟು ಹೋದನು. ಅವನಿಂದ ಏನಾದರೂ ಹೊರಗೆಡವಬೇಕೆಂದು ಚಂಪಾವತಿಯು ಮಾಡಿದ ಪ್ರಯತ್ನವು ನಿಷ್ಫಲವಾಯಿತು. ಪಾಪಿಷ್ಠೆಯು ತಿರುಗಿ ಬಂದಳು. ಅವಳು ಬರುವಾಗ ದಾರಿಯಲ್ಲಿ ತನ್ನಷ್ಟಕ್ಕೆ "ಇಂಥ ಸುಂದರ ತರುಣ ಪುರುಷನನ್ನು ನಾನು ನನ್ನ ಜನ್ಮದಲ್ಲಿ ಎಂದೂ ಕಂಡಿದ್ದಿಲ್ಲ! ನಮ್ಮ ಹೊಸ ರಾಣಿಯು ತಾರುಣ್ಯದಿಂದ ತುಂಬಿ ತುಳುಕುವ ವಿಲಾಸವತಿಯು ಇರುವಳು. ಇವನು ಯಾರಿರಬಹುದು? ಇವನ ಇಷ್ಟೊಂದು ಗುಪ್ತ ಮಾತು ಕಥೆಯು ಏನಿರಬಹುದು?" ಎಂದು ವಿಚಾರಮಾಡುವಲ್ಲಿ ನಿಮಗ್ನಳಾದಳು.

ಚಂಪೆಯು ಸ್ವಭಾವತಃ ದುಷ್ಟೆಯು ಇದ್ದು ಅವಳು ಸುಶೀಲೆಯ ಸವತಿಯಾದ ಕಮಲಕುಮಾರಿಯ ಜೀವದ ಗೆಳತಿಯಾಗಿದ್ದಳು. ಅವಳು ಯಾವಾಗಲು ಕಮಲಕುಮಾರಿಯ ಹಿತವನ್ನು ಮಾಡುವಲ್ಲಿ ತತ್ಪರಳಿರುತ್ತಿದ್ದು ಅವಳಿಂದ ತುಂಬಾ ಉಪಕೃತಳಾಗಿದ್ದಳು. ಇದಲ್ಲದೆ ಸ್ವಾರ್ಥವೇ ಅವಳ ಜೀವನದ ಮಂತ್ರವಾಗಿತ್ತು. ಅಂದಮೇಲೆ ಅವಳಿಗೆ ಸುವಿಚಾರವು ತೋಚುವ ಬಗೆ ಎಲ್ಲಿ? ಸುಶೀಲೆಯು ರಾತ್ರಿಯಲ್ಲಿ ತನ್ನ ಸಂಗಡ ಶಿವಮಂದಿರಕ್ಕೆ ಬರಬೇಕೆಂದು ಚಂಪೆಗೆ ವಿನಂತಿಯನ್ನು ಮಾಡಿದಕೂಡಲೆ ಅವಳು ಆನಂದದಿಂದ ಅದನ್ನು ಮಾನ್ಯಮಾಡಿದಳು. ಅವಳು ಬಹಿರಂಗದಲ್ಲಿ ಅತ್ಯಂತ ಪ್ರೇಮದ ಆವಿರ್ಭಾವವನ್ನು ತೋರಿಸಿ ನಗನಗುತ್ತ "ಅಹಹ! ತಾಯಿ, ಅವರ ರೂಪವು ಎಷ್ಟು ಸುಂದರವಾದದ್ದು! ಇಂಥ ತೇಜಸ್ವಿ ಪುರುಷನನ್ನು ನಾನು ತ್ರಿಲೋಕಗಳಲ್ಲಿಯೂ ನೋಡಲಿಲ್ಲ! ರಾಣೀಸಾಹೇಬರೇ, ಅವರು ತಮಗೇನಾಗಬೇಕು?" ಎಂದು ಕೇಳಿದಳು.

ಚಂಪಾವತಿಯು ಮಾಡಿದ ಈ ಪ್ರಶ್ನೆಗೆ ಸುಶೀಲೆಯು ಉತ್ತರಕೊಡಲಿಲ್ಲ. ಅವಳು ಮೌನದಿಂದಿದ್ದಳು. ಅವಳ ಮನಸ್ಸಿನಲ್ಲಿಯೂ ಒಮ್ಮೆಂದೊಮ್ಮೆ "ಅವನು ನನಗೇನಾಗಬೇಕು?" ಎಂಬ ಪ್ರಶ್ನೆಯು ಹುಟ್ಟಿತು. ಆ ಕೂಡಲೆ

ಮನಸ್ಸಿನಲ್ಲಿ" ಅವನು ಯಾವನಾದರೂ ಜನ್ಮಾಂತರದ ಸಂಬಂಧಿಕನಿರಬಹುದು" ಎಂಬ ಉತ್ತರವು ಸೂಚಿತವಾಯಿತು. ಅಷ್ಟಕ್ಕೇ ಅವಳು ತನ್ನ ಮನಸ್ಸಿನಲ್ಲಿ ಚಕಿತಳಾಗಿ ಕಿಂಚಿತ್ತು ವ್ಯಸನಬಟ್ಟು ಸ್ವಲ್ಪ ಹೊತ್ತಿನ ಮೇಲೆ "ನನಗೆ ಏನೂ ಆಗಬೇಕಾಗಿಲ್ಲ" ಎಂದು ಚಂಪಾವತಿಗೆ ಬಹಿರಂಗವಾಗಿ ಉತ್ತರಕೊಟ್ಟಳು.

## ಭಾಗ ೧೦.

## ಪರಸ್ತ್ರೀಯು.

"ನೀವು ಪುನಃ ಬರಬೇಡಿರಿ."

"ಸುಶೀಲೇ, ನನಗೆ ಈಗ ಬೆಟ್ಟಿಯಾಗುವದು ಪಾಪವೆಂಬುವದು ನನಗೆ ತಿಳಿಯುತ್ತದೆ. ಈಗ ನೀನು ಪರಸ್ತ್ರೀಯು; ಅಂಬರೇಶ್ವರನ ರಾಣಿಯು; ನಿನ್ನ ಸುಂದರ ಮುಖದ ದರ್ಶನವು ಸೂರ್ಯನಿಗೆ ಸಹ ಆಗುವದು ಅಶಕ್ಯವು-ಎಂಬುವದು ನನಗೆ ಗೊತ್ತುಂಟು. ಆದರೆ ಈ ಜಗತ್ತಿನಲ್ಲಿ ಪುನಃ ನನ್ನದೂ ನಿನ್ನದೂ ಬೆಟ್ಟಿಯಾಗುವದು ಅಸಂಭವವು ಆದ್ದರಿಂದ ಈ ಜನ್ಮದಲ್ಲಿ ನಿನ್ನ ಕಡೇ ಬೆಟ್ಟಿಯನ್ನು ತೆಗೆದುಕೊಂಡು ನಿನ್ನಿಂದ ಕಡೇ ನಿರೂಪವನ್ನು ಹೊಂದಬೇಕೆಂದು ಈ ಸಾಹಸಕೃತ್ಯವನ್ನು ಮಾಡಿರುತ್ತೇನೆ."

"ಎಲ್ಲಿಗೆ ಹೊರಟಿರುವಿರಿ?"

"ದಕ್ಷಿಣದ ಕಡೆಗೆ."

"ಅದೇಕೆ?"

"ಯುದ್ಧಕ್ಕಾಗಿ."

"ಬಾದಶಹನು ನಿಮ್ಮನ್ನು ಸೇನಾಪತಿಯಾಗಿ ನೇಮಿಸಿರುವನೇ?"

"ಬಾದಶಹನು ನನ್ನನ್ನು ನೇಮಿಸಿಲ್ಲ. ನಾನಾಗಿಯೇ ಈ ಕೆಲಸವನ್ನು ಕೈಕೊಂಡಿದ್ದೇನೆ."

"ಕಾರಣವೇನು?"

"ಜೀವದ ಬೇಸರಿಕೆಯು ಬಂತೆಂದು! ಯುದ್ಧದಲ್ಲಿ ಸತ್ತು ಸ್ವರ್ಗಕ್ಕೆ ಹೋಗುವೆನು ಜೀವದಿಂದಿದ್ದು ನಿನ್ನ ನೆನಪುಮಾಡುತ್ತ ಕುದಿಯಲಾರೆನು; ಯಾಕಂದರೆ ಅದರಿಂದ ನನಗೆ ನರಕಕ್ಕೆ ಹೋಗಬೇಕಾಗುವದು."

"ಬಂಧುರಾಯರೇ, ನೀವು ವಿದ್ಯಾವಂತರೂ ಬುದ್ಧಿವಂತರೂ ಇರುತ್ತೀರಿ. ನಿಮ್ಮಲ್ಲಿ ಕರ್ತೃತ್ವಶಕ್ತಿಯುಂಟು. ಇದಲ್ಲದೆ ಸತ್ತಾಧೀಶರಾದ ದಿಲ್ಲೀಶ್ವರರ ಪ್ರೀತಿಯು ನಿಮ್ಮ ಮೇಲೆ ಸಂಪೂರ್ಣವಿರುವದು ನಿಮಗೆ ಅನೇಕ ಆಶೆಗಳೂ ಮಹತ್ವಾಕಾಂಕ್ಷೆಗಳೂ ಇರುತ್ತಿದ್ದು ಅವುಗಳನ್ನು ಸಫಲ ಮಾಡುವ ಸಾಮರ್ಥ್ಯವನ್ನು ಈಶ್ವರನು ನಿಮಗೆ ಕೊಟ್ಟಿರುತ್ತಾನೆ. ಹೀಗಿದ್ದು ಈ ವೈರಾಗ್ಯವೇತಕ್ಕೆ? ಇಷ್ಟು ಪರಿಯಿಂದ ಜೀವದ ಬೇಸರಿಕೆಯು ಯಾಕ ಬಂತು? ಪಾಪಿಷ್ಠಳಾದ ನನ್ನನ್ನು ಮರೆತುಬಿಡಿರಿ. ಮುಂಚಿನ ಎಲ್ಲ ಸಂಗತಿಗಳನ್ನು ನಿಮ್ಮ ಮನಸ್ಸಿನೊಳಗಿಂದ ಅಳಕಿಸಿಬಿಡಿರಿ. ನಾವು ದಿನಾಲು ಕಾಣುವ ಕನಸುಗಳಂತೆ ಇದೊಂದು ಕನಸೆಂದು ತಿಳಿಯಬೇಕಾಗಿ ನೀವೇ ನನಗೆ ನಿಮ್ಮ ಪತ್ರದಲ್ಲಿ ಉಪದೇಶಮಾಡಿದ್ದಿಲ್ಲವೇ? ನಿಮ್ಮ ಕೂಡ ನಾನು ಹಿಂದಕ್ಕೆ ಆಶ್ರಮದಲ್ಲಿ ಇದ್ದೆನೆಂದು ಸಹ ಮರೆತುಬಿಡಿರಿ. ಮನಸ್ಸಿನ ಮೇಲೆ ಜಯವನ್ನು ಸಂಪಾದಿಸುವದೇ ನಿಜವಾದ ವೀರತ್ವವೆಂದು ತಾತನು ನಿಮಗೆ ಹೇಳಿದ್ದು ನಿಮ್ಮ ಸ್ಮರಣದಲ್ಲಿ ಇಲ್ಲವೇ?"

ಮಹೇಶನು ನಿಟ್ಟುಸುರಿಟ್ಟು "ನಿನ್ನನ್ನು ಮರೆಯಲಿಕ್ಕೆ ನಾನು ಪ್ರಯತ್ನ ಮಾಡಿ ಮಾಡಿ ದಣಿದೆನು. ಇಷ್ಟು ದಿವಸಗಳ ಪರಿಯಂತರ ನಾನು ನಿನ್ನನ್ನು ಸ್ವಲ್ಪ ಮರೆತಿದ್ದೆನು ಆದರೆ ತೀರ್ಥರೂಪರು ಈಗೀಗ ಬೆಟ್ಟಿಯಾಗಿ ನೀನು ಅಂಬರೇಶ್ವರನ ರಾಣಿಯಾಗಿರುತ್ತೀ ಎಂದು ಹೇಳಿದ್ದನ್ನು ಕೇಳಿದ ಕೂಡಲೆ ನಿನ್ನನ್ನು ಪುನಃ ಒಮ್ಮೆ ನೋಡಬೇಕೆಂದು ನನ್ನ ಮನಸ್ಸಿನಲ್ಲಿ ಅನಿವಾರ ಅಪೇಕ್ಷೆಯು ಉತ್ಪನ್ನವಾಯಿತು. ನನ್ನ ಬಾಲ್ಯ ಸಖಿಯಳನ್ನು ಒಮ್ಮೆ ಕಣ್ಣುತುಂಬ ನೋಡಿ ಪ್ರಾಣತ್ಯಾಗಮಾಡಬೇಕೆಂಬದಷ್ಟೇ ಇಚ್ಛೆಯು ಉಳಿದಿತ್ತು. ಈ ಹೊತ್ತು ನಿನ್ನ ದರ್ಶನವಾದ್ದರಿಂದ ನನ್ನ ಇಚ್ಛೆಯು ತೃಪ್ತವಾಯಿತು. ಸುಶೀಲೇ! ನನಗೆ ನೀನು ಪ್ರಾಪ್ತಳಾಗದ್ದರಿಂದ ನಾನು ದೇಹತ್ಯಾಗಮಾಡಲಿಕ್ಕೆ ಉದ್ಯುಕ್ತನಾಗಿರುತ್ತೇನೆಂದು ತಿಳಿಯಬೇಡ.

ನಿನ್ನ ನನ್ನ ಸಂಬಂಧವು ಈ ಜನ್ಮದಲ್ಲಿ ಆಗುವದು ಅತ್ಯಂತ ಅಸಂಭವನೀಯ ವೆಂದು ನನಗೆ ತಿಳಿದಿದ್ದಿಲ್ಲವೆಂದು ಭಾವಿಸಬೇಡ. ಆದಾಗ್ಯೂ ನನ್ನ ಜೀವದ ಭಾರವು ಯಾಕೆ ಅಸಹ್ಯವಿರುತ್ತದೆಂಬುವದು ನನಗೆ ತಿಳಿಯದು! ಉದ್ಯೋಗ ಮಾಡಲಿಕ್ಕೆ ಮನಸ್ಸಾಗಲೊಲ್ಲದು. ಮೈಯಲ್ಲಿ ಶಕ್ತಿಯು ಇಲ್ಲ. ಮನಸ್ಸಿನಲ್ಲಿ ಉತ್ಸಾಹವಿಲ್ಲ ಅಹೋರಾತ್ರಿ ಕೇವಲ ಚಿಂತೆಯಲ್ಲಿ ನಿಮಗ್ನನಾಗಿರುತ್ತೇನೆ ಚಿಂತೆಯು ನನ್ನನ್ನು ದಹಿಸುತ್ತಲಿದೆ. ಈ ರೀತಿಯಿಂದ ಉದಾಸೀನನಾಗಿ ಜೀವಿಸುವದಕ್ಕೆ ನಾನು ಬೇಸರಗೊಂಡಿರುತ್ತೇನೆ. ನಾನು ಚಿಂತೆಯಿಂದ ಮುಕ್ತನಾಗುವದಕ್ಕಾಗಿ ಈ ನಿಶ್ಚಯವನ್ನು ಮಾಡಿರುತ್ತೇನೆ."

ಮಹೇಶನ ಭಾಷಣವನ್ನು ಸುಶೀಲೆಯು ಶಾಂತಚಿತ್ತದಿಂದ ಕೇಳಿಕೊಂಡು ಅವನ ಮನಸ್ಸಿನ ವಿಲಕ್ಷಣವಾದ ವ್ಯಾಕುಲತೆಯನ್ನು ಕಂಡು ಸ್ಥಿರ ಗಂಭೀರ ಸ್ವರದಿಂದ "ಬಂಧುರಾಯರೇ, ಈ ಜಗತ್ತಿನಲ್ಲಿ ಪ್ರೇಮವು ಅನೇಕ ಪ್ರಕಾರದ್ದು ಇರುವದು. ನಾವು ಉಭಯತರು ಬಾಲ್ಯದಲ್ಲಿ ಒಂದೇ ಕಡೆಗೆ ಕೂಡಿ ಆಡಿ, ಕೂಡಿ ಬೆಳೆದು, ಪ್ರೇಮದಿಂದ ವೇಳೆಗಳೆದೆವು. ನಮ್ಮ ಉಭಯತರಿಗೆ ಪರಸ್ಪರ ವಿರಹವು ಕ್ಷಣಹೊತ್ತು ಸಹ ಸಹನವಾಗಲಿಲ್ಲ. ನಮ್ಮಿಬ್ಬರ ಬಂಧುಭಗಿನಿ ಸಂಬಂಧವು ಇದೇ ಪ್ರಕಾರ ಯಾಕೆ ಚಿರಕಾಲ ಇರಬಾರದು? ನಾನು ಯಾವಾಗಲು ನಿಮ್ಮವಳು. ನೀವು ಯಾವಾಗಲು ನನ್ನವರು! ನೀವು ನನ್ನ ಪ್ರಿಯಕರ ಬಂಧುಗಳು, ನಿಮ್ಮ ಮೇಲೆ ನಾನು ನನ್ನ ಪ್ರಾಣದಕಿಂತ ಹೆಚ್ಚು ಪ್ರೇಮಮಾಡುವೆನು. ನೀವು ನಿಮ್ಮ ಪ್ರಿಯಭಗಿನಿಯ ಮೇಲೆ ಪೂರ್ವದಂತೆಯೇ ಪ್ರೇಮಮಾಡಿರಿ. ನನ್ನನ್ನು ಎಂದಿಗೂ ಮರೆಯಬೇಡಿರಿ. ಇಷ್ಟೇ ನಾನು ಬೇಡಿಕೊಳ್ಳುತ್ತೇನೆ. ಇದರಿಂದ ನಿಮ್ಮ ಮನಸ್ಸಿನ ಸಮಾಧಾನವಾಗುವದಿಲ್ಲವೇ? ಹೋಗಿರಿ— ಇನ್ನು ಇಲ್ಲಿ ನಿಂತುಕೊಳ್ಳಬೇಡಿರಿ. — ನಾನು ಪರಸ್ತ್ರೀಯಳಿದ್ದೇನೆ."

ಆ ಮೇಲೆ ಮಹೇಶನು ಏನೂ ಮಾತಾಡಲಿಲ್ಲ. ಅವನ ಮನಸ್ಸು ಶತಪಟ್ಟು ವಿಚ್ಛಿನ್ನವಾಗಿ ಹೋಯಿತು. ಇಂಥ ಮರ್ಮಭೇದಕವಾದ ಮತ್ತು ಭಯಂಕರವಾದ ಆಘಾತವನ್ನು ಅವನು ಈ ಹೊತ್ತಿನವರೆಗೆ ಎಂದಿಗೂ ಅನುಭವಿಸಿದ್ದಿಲ್ಲ! ಮಹೇಶನು ಮೊದಲಿನವನೇ ಮತ್ತು ಸುಶೀಲೆಯು

ಸಹ ಮೊದಲಿನವಳೇ. ಹೀಗಿದ್ದು ಸುಶೀಲೆಯು ಮಹೇಶನ ಸಂಗಡ ಬಹಳ ಹೊತ್ತು ಮಾತಾಡುತ್ತ ನಿಲ್ಲಲಿಕ್ಕೆ ಒಪ್ಪಲಿಲ್ಲ. ಮಹೇಶನು ತನ್ನ ಹೆಜ್ಜೆಗಳ ಸಪ್ಪಳಗಳನ್ನು ಸಹ ಮಾಡದೆ ಮೆಲ್ಲ ಮೆಲ್ಲನೆ ಹಿಂದಕ್ಕೆ ಸರಿದುಕೊಂಡು ನಿಬಿಡಾಂಧಃಕಾರದಲ್ಲಿ ಅದೃಶ್ಯನಾದನು. ಹೋಗುವಾಗ್ಗೆ ಮಾತ್ರ ಅವನು ದೀರ್ಘಶ್ವಾಸದಿಂದ ಉಸುರುಗರೆದನು. ಆ ದುರ್ದೈವಿಯ ಉಸುರನ್ನು ಯಾರೂ ಕೇಳಲಿಲ್ಲ! ಅವನ ಮನಸ್ಸಿನ ಅಪರಿಮಿತ ಅಸ್ವಮಾಧಾನವು ಯಾರಿಗೂ ಗೊತ್ತಾಗಲಿಲ್ಲ!

# ಭಾಗ ೧೧.

## ಪತಿವ್ರತೆಯು.

ಇತ್ತಲಾ ಸುಶೀಲೆಯ ಮನಸ್ಸಿನ ಸ್ಥಿತಿಯು ಏನಾಗಿರುತ್ತದೆಂಬುವದು ಅವಳಿಗೇ ಗೊತ್ತು! ಸ್ವಲ್ಪ ಹೊತ್ತಿನ ಮೇಲೆ ಅವಳು ಎಚ್ಚರದ ಮೇಲೆ ಬಂದು ಮಹೇಶನು ಅಲ್ಲಿಂದ ಹೊರಟುಹೋದದ್ದನ್ನು ನೋಡಿದವಳೇ ತಾನೂ ಮೆಲ್ಲಮೆಲ್ಲನೆ ಶಿವಮಂದಿರದಿಂದ ಹೊರಬಿದ್ದು ಚಂಪಾವತಿಯನ್ನು ಕೂಗಿದಳು. ಅರ್ಥಾತ್ ಚಂಪಾವತಿಯು ಅಲ್ಲಿ ಇಲ್ಲದ್ದರಿಂದ ಅವಳ ಕೂಗಿಗೆ ಉತ್ತರವೇ ದೊರಕಲಿಲ್ಲ. ಅದ್ದರಿಂದ ಸುಶೀಲೆಯು ಬಹಳ ಗಾಬರಿಯಾದಳು. ಶಿವಮಂದಿರದಿಂದ ಅವಳ ಮಂದಿರಕ್ಕೆ ಹೋಗುವ ಮಾರ್ಗವು ಬಹಳ ದೂರವಿದ್ದಿಲ್ಲ. ಅವಳೊಬ್ಬಳೇ ರಾಜಮಂದಿರಕ್ಕೆ ಹೋಗಬಹುದಿತ್ತು. ಆದರೆ ಚಂಪಾವತಿಯು ಅಲ್ಲಿ ಇಲ್ಲದ್ದನ್ನು ಕಂಡು ಸುಶೀಲೆಯು ಬಹಳ ಭಯಸ್ಥಳಾದಳು ಚಂಪಾವತಿಯು ಒಂದು ವೇಳೆ ಮುಂದೆಹೋಗಿ ನಿಂತು ತನ್ನ ದಾರಿಯನ್ನು ನೋಡುತ್ತಿರಬಹುದೆಂದು ನೆನಿಸಿ ಲಗಬಗೆಯಿಂದ ಸ್ವಲ್ಪ ಮುಂದಕ್ಕೆ ಹೋಗಿ ಪುನಃ ಚಂಪಾವತಿಯನ್ನು ಎರಡು ಮೂರು ಸಾರೆ ಕೂಗಿದಳು. ಆದರೆ ಅದಕ್ಕೆ ಉತ್ತರವೇ ಇಲ್ಲ! ಪಾಪ! ಈ ವಿಚಿತ್ರ ಪ್ರಕಾರವನ್ನು ನೋಡಿ ಆ ಸಾತ್ವಿಕ ಬಾಲಿಕೆಯು ಬಹಳ ಗಾಬರಿಯಾದಳು. ಅವಳ ಮನಸ್ಸು ನಾನಾ ಪ್ರಕಾರದ ಭೀತಿಜನಕ ವಿಚಾರಗಳಿಂದ ಅಲ್ಲೋಲ

ಕಲ್ಲೋಲವಾಯಿತು. ಅವಳು ಇಂಥ ಸ್ಥಿತಿಯಲ್ಲಿರುವಾಗ ಯಾರೋ ಒಬ್ಬರು ಅವಳ ಸಮೀಪಕ್ಕೆ ಬರುವ ಹೆಜ್ಜೆಯ ಸಪ್ಪಳವು ಕೇಳಿಸಿತು. ಆಗಂತೂ ಅವಳು ಬೇಟೆಗಾರನ ಬಾಣಕ್ಕೆ ಅಂಜಿಕೊಂಡ ಚಿಗರಿಯಂತೆ ಥರಥರನೆ ನಡುಗಹತ್ತಿದಳು. ಅವಳ ಎದೆಯು ಹಾರಹತ್ತಿತು ಮೈಯಲ್ಲಿ ಬೆವರು ಒಡೆಯಿತು. ಕಣ್ಣು ಕತ್ತಲುಗೂಡಿಸಿದವು ಬಾಯಿಯು ಒಣಗಿಹೋಯಿತು. ಆಗ ಅವಳು ಸ್ತಬ್ಧಳಾಗಿ ನಿಂತಲ್ಲೇ ನಿಂತುಕೊಂಡು ನೋಡಲಾಗಿ ಯಾವನೋ ಒಬ್ಬ ಭವ್ಯ ಮನುಷ್ಯನು ಕಪ್ಪು ವಸ್ತ್ರಗಳಿಂದ ತನ್ನ ಸರ್ವಾಂಗವನ್ನು ಮುಚ್ಚಿಕೊಂಡು ಅವಳ ಮುಂದೆ ಬಂದು ಅವಳನ್ನು ದಾರೀಕಟ್ಟಿ, ಕರ್ಕಶಸ್ವರದಿಂದ "ಅಂಬರದ ರಾಣಿಯವರ ಸ್ವಾರಿಯು ಇಂಥ ಕಗ್ಗತ್ತಲೆಯಲ್ಲಿ ಯಾರನ್ನು ಸಂತೋಷಗೊಳಿಸಲಿಕ್ಕೆ ಹೋಗಿತ್ತು?" ಎಂದು ಕೇಳಿದನು.

ಸುಶೀಲೆಯು ಆ ಧ್ವನಿಯನ್ನು ತತ್ಕಾಲವೇ ಗುರುತು ಹಿಡಿದು ಭಯದಿಂದ ಕಂಪಾಯಮಾನಳಾಗಿ ದೀನವಾಣಿಯಿಂದ "ಮಹಾರಾಜರೇ! ಈ ಪ್ರಕಾರ ನಿಮ್ಮ ದಾಸಿಯನ್ನು ಹಂಗಿಸಬೇಡಿರಿ! ನಾನು ನಿಷ್ಪಾಪಳಿದ್ದೇನೆ" ಎಂದು ಉತ್ತರಕೊಟ್ಟಳು.

"ಅದಂತೂ ತಿಳಿದುಹೋಯಿತು. ಆದರೆ ಈ ಬ್ರಾಹ್ಮಣ ಕುಮಾರನು ಯಾವನು?"

ಸರಳಹೃದಯಳಾದ ಸುಶೀಲೆಯ ಬಾಯಿಂದ ಅಸತ್ಯನುಡಿಯು ಹೇಗೆ ಬಂದೀತು? ಆದಾಗ್ಯೂ ಬ್ರಾಹ್ಮಣ ಕುಮಾರನ ಗುರುತನ್ನು ತಿಳಿಸಲಿಕ್ಕೆ ಸುಶೀಲೆಯ ಧೈರ್ಯವು ಆಗಲೊಲ್ಲದು. ಇಂಥ ಘೋರವಾದ ರಾತ್ರಿಯಲ್ಲಿ ಅಂಬರದ ರಾಣಿಯು ಬ್ರಾಹ್ಮಣ ವೇಷಧಾರಿಯಾದ ಒಬ್ಬ ಮುಸಲ್ಮಾನನಿಗೆ ಏಕಾಂತದಲ್ಲಿ ಭೆಟ್ಟಿಯಾಗಲಿಕ್ಕೆ ಹೋಗಿದ್ದೆನೆಂದು ಹೇಳಬೇಕೇ? ಇದಂತೂ ಅವಳಿಗೆ ಭಯಂಕರವಾಗಿ ತೋರಿತು! ಇದಲ್ಲದೆ ಮಹೇಶನ ನಿಜವಾದ ವೃತ್ತಾಂತವನ್ನು ತಿಳಿಸಿದರೆ ಬಹಳ ಅನರ್ಥವು ಸಂಭವಿಸೀತೆಂದು ಅವಳು ಹೆದರಿದಳು. ಮಹೇಶನು ಬಾದಶಹನ ಪರಮಮಿತ್ರನಾದ ಫೈಜಿಯೆಂದು ತಿಳಿದುಬಂದರೆ ಸೇನಾಪತಿಯಾದ ಮಾನಸಿಂಹನ ಮತ್ತು ಫೈಜಿಯ ನಡುವೆ ಭಯಂಕರವಾದ ವೈಮನಸ್ಸು ಉತ್ಪನ್ನವಾದೀ

ತೆಂದು ಹಾಗೂ ಈ ಯಾವತ್ತು ಸಂಗತಿಯು ಬಾದಶಹನ ಕಿವಿಗೆ ಮುಟ್ಟಿ ರಾಜ್ಯದಲ್ಲಿ ದೊಡ್ಡ ಅನರ್ಥವು ಸಂಭವಿಸೀತೆಂಬು ಸುಶೀಲೆಯು ಬಹಳ ಹೆದರಿ ಕೊಂಡಳು. ಗಂಡನ ಪ್ರಶ್ನೆಗೆ ಏನು ಉತ್ತರಕೊಡಬೇಕೆಂಬುವದು ಅವ ಳಿಗೆ ತಿಳಿಯಲಿಲ್ಲ. ಹಾಗೂ ಹೀಗೂ ಧೈರ್ಯಮಾಡಿ "ಆ ಬ್ರಾಹ್ಮಣ ಕುಮಾರನು ನನ್ನ ಬಾಲ್ಯಮಿತ್ರನಿರುತ್ತಾನೆ. ನಾವಿಬ್ಬರೂ ಒಂದೇ ಸ್ಥಳದಲ್ಲಿ ಸಣ್ಣವರಿದ್ದವರು ದೊಡ್ಡವರಾದೆವು" ಎಂದು ಹೇಳಿದಳು.

ಇದನ್ನು ಕೇಳಿ ಮಾನಸಿಂಹನು ಹೆಚ್ಚು ಕರ್ಕಶಸ್ವರದಿಂದ "ಸುಶೀಲೇ! ನೀನು ಅಂಬರದ ರಾಣಿಯೂ, ಮಾನಸಿಂಹನ ಧರ್ಮಪತ್ನಿಯೂ ಇದ್ದು ಇಂಥ ಘೋರವಾದ ರಾತ್ರಿಯಲ್ಲಿ ನಗರದ ಹೊರಗಿನ ಶಿವಮಂದಿರಕ್ಕೆ ಒಬ್ಬ ರೂಪವಂತನಾದ ತರುಣ ಬ್ರಾಹ್ಮಣನಿಗೆ ಗುಪ್ತವಾಗಿ ಬೆಟ್ಟಿಯಾಗಲಿಕ್ಕೆ ಬಂದಿ. ಇದರ ಮೇಲಿಂದ ಅಂತಃಪುರದಲ್ಲಿ ಏನು ಅರ್ಥಮಾಡುವರೆಂಬ ದರ ಕಲ್ಪನೆಯು ನಿನಗುಂಟೇ?" ಎಂದು ಕೇಳಿದನು.

"ಮಹಾರಾಜರೇ, ಇಲ್ಲ. ಹುಚ್ಚಿಯಾದ ನನಗೆ ಈ ಕ್ಷಣದ ಪರಿ ಯಂತರ ಈ ವಿಚಾರವು ತೋಚಿದ್ದಿಲ್ಲ. ಇದು ನನ್ನಿಂದ ಪ್ರಮಾದ ವಾಯಿತು. ಆದರೆ ಮಹಾರಾಜರೇ, ಎರಡನೆಯವರು ಬೇಕಾದ್ದು ಮಾತಾ ಡಿದರೂ ನೀವಾದರೂ ನನ್ನ ಮೇಲೆ ವಿಶ್ವಾಸವಿಡುವಿರಷ್ಟೇ?"

ಮಾನಸಿಂಹನು ಸಿಟ್ಟಿಗೆದ್ದು "ಇಲ್ಲ, ನಾನು ವಿಶ್ವಾಸವಿಡಲಾರೆನು! ನಿಮ್ಮ ಉಭಯತರ ಭಾಷಣವನ್ನು ನಾನು ಕೇಳದಿದ್ದರೆ ಒಂದು ವೇಳೆ ನನಗೆ ಸಂಶಯವು ಬರುತ್ತಿದ್ದಿಲ್ಲ. ಆದರೆ ಇನ್ನು ಮುಂದೆ ನಿನ್ನ ಮೇಲೆ ವಿಶ್ವಾಸವಿಡುವದು ಅಸಂಭವವದೆ. ಸುಶೀಲೇ! ಈ ಹೊತ್ತು ಮುಂಜಾನೆ ನಿನ್ನ ಬಾಷಣದಿಂದ ನನಗೆ ಸ್ವರ್ಗವು ಎರಡು ಬೆರಳು ಉಳಿದಂತೆ ಕಾಣಿಸ ಹತ್ತಿತ್ತು. ಇಷ್ಟರಲ್ಲಿಯೇ ನಿನ್ನ ಪಾಪಾಚರಣವು ನನ್ನ ದೃಷ್ಟಿಗೆ ಬೀಳ ಬೇಕೇ? ಸ್ತ್ರೀಚರಿತ್ರವು ದೇವಾದಿಕರಿಗೆ ಸಹ ಅಗಮ್ಯವಿರುತ್ತದೆಂಬ ಮಾತನ್ನು ನೀನು ನನಗೆ ಮನವರಿಕೆಮಾಡಿಕೊಟ್ಟೆ. ನೀನು ರಾಜಪತ್ನಿಯು ಇದ್ದು ಇಷ್ಟೊಂದು ರಾತ್ರಿಯಲ್ಲಿ ಏಕಾಂಗಿಯಾಗಿ ಇಷ್ಟುದೂರ ಏಕಾಂತ ಸ್ಥಾನಕ್ಕೆ ಯಾಕೆ ಬಂದಿದ್ದಿ? ಸಮಾಧಾನಕಾರಕ ಉತರವನ್ನು ಕೊಡು!"

ಇದನ್ನು ಕೇಳಿ ಸುಶೀಲೆಯು ಬಹಳ ಸಂಕಟದಲ್ಲಿ ಬಿದ್ದಳು. ಏನು ಉತ್ತರಕೊಡಬೇಕೆಂಬುವದು ಇವಳಿಗೆ ಗೋಚರವಾಗಲಿಲ್ಲ. ಮಹೇಶನ ಸ್ನಂತೂ ಉಳಿಸಬೇಕೆಂದು ನಿಶ್ಚಯಮಾಡಿದಳು ಅವಳು ತನ್ನ ಮನಸ್ಸಿನಲ್ಲಿ ಅಂದುಕೊಂಡದ್ದೇನೆಂದರೆ:— "ನಾನು ಕಾಯಾ ವಾಚಾಮನಸ್ಸುಗಳಿಂದ ಪವಿತ್ರಳಿರುತ್ತೇನೆ. ಸ್ವಪ್ನದಲ್ಲಿ ಸಹ ನನಗೆ ಪಾಪಸಂಸ್ಕಾರವು ಆಗಿಲ್ಲ. ಇದು ಎರಡನೆಯವರಿಗೆ ಗೊತ್ತಿಲ್ಲದಿದ್ದರೂ ಆ ಸರ್ವಸಾಕ್ಷಿಯಾದ ಪರಮೇಶ್ವರನಿಗೆ ಗೊತ್ತಿರುತ್ತದೆ. ನಾನು ನಿಷ್ಕಾರಣದಿಂದ ಸಂಶಯಕ್ಕೆ ಗುರಿಯಾಗಿರುತ್ತೇನೆಂಬುವದು ಸತ್ಯವು. ದೈವದಲ್ಲಿದ್ದದ್ದು ಒರಲಿ; ಆದರೆ ನನ್ನ ಪ್ರಿಯ ಮಹೇಶನ ಮಾನಕ್ಕೆ ಕಲಂಕವನ್ನು ಹಚ್ಚುವ ಪಾತಕವನ್ನು ನನ್ನ ಪ್ರಾಣಹೋದರೂ ಮಾಡಲಿಕ್ಕಿಲ್ಲ." ಈ ಪ್ರಕಾರ ಅವಳು ನಿಶ್ಚಯಮಾಡಿ ಕಂಪಿತ ಸ್ವರದಿಂದ "ನಾನೇನು ಹೇಳಲಿ? ನೀವು ರಾಜರೂ ನ್ಯಾಯಕರ್ತರೂ ಇರುತ್ತೀರಿ. ನಿಮಗೆ ನಾನು ಅಪರಾಧಿಯಾಗಿ ಕಾಣುತ್ತಿದ್ದರೆ ನನಗೆ ಬೇಕಾದ ಶಿಕ್ಷೆಯನ್ನು ವಿಧಿಸಿರಿ. ರಾಜಾಜ್ಞೆಯನ್ನು ಆನಂದದಿಂದ ಮಾನ್ಯಮಾಡುವೆನು" ಎಂದು ಹೇಳಿದಳು

ಪಾಷಾಣ ಹೃದಯನಾದ ಮಾನಸಿಂಹನು ಕಠೋರ ಸ್ವರದಿಂದ "ನಿನಗೆ ಎಲ್ಲ ಸಂಗತಿಗಳನ್ನು ಸ್ಪಷ್ಟವಾಗಿ ಹೇಳಲಿಕ್ಕೆ ಧೈರ್ಯವಾಗದೆ ಇರುವ ಪಕ್ಷದಲ್ಲಿ ನನ್ನ ಸಂಶಯವು ನಿಶ್ಚಯವಾದದ್ದೆಂಬುವದು ನಿರ್ವಿವಾದವದೆ. ಇನ್ನು ಮೇಲೆ ನೀನು ನನ್ನ ನಗರದಲ್ಲಿ ಪ್ರವೇಶಮಾಡುವದು ಅಶಕ್ಯವು! ನನ್ನ ರಾಜ್ಯದಲ್ಲಿ ನಿನಗೆ ಸ್ಥಾನವು ಸಿಗಲಾರದು." ಎಂದು ನಿಷ್ಠುರವಾಗಿ ಉತ್ತರಕೊಟ್ಟನು

ಮಾನಸಿಂಹನ ಭಾಷಣವು ಕಿವಿಗೆ ಬಿದ್ದಕೂಡಲೆ ಮಸ್ತಕದ ಮೇಲೆ ವಿದ್ಯುಲ್ಲತೆಯು ಬಿದ್ದ ಮನುಷ್ಯನು ಒಮ್ಮಿಂದೊಮ್ಮೆ ಸ್ಮೃತಿ ತಪ್ಪುವಂತೆ ಪ್ರಿಯ ಸುಶೀಲೆಯ ಅವಸ್ಥೆಯಾಯಿತು. ಅವಳು ಬಿಕ್ಕುತ್ತ ಬಿಕ್ಕುತ್ತ ಆರ್ತ ಸ್ವರದಿಂದ "ಮಹಾರಾಜರೇ, ನಾನು ನಿಮ್ಮ ರಾಣಿಯೂ ಧರ್ಮಪತ್ನಿಯೂ ಇದ್ದೇನೆ. ನಿಮ್ಮ ವಿಶಾಲವಾದ ರಾಜ್ಯದಲ್ಲಿ ನನಗೆ ಇರಲಿಕ್ಕೆ ಒಂದು, ಸಣ್ಣ ಬಡ ಗುಡಿಸಲವು ಸಹ ಸಿಗಲಾರದೇ? ಅಂದಮೇಲೆ, ಮಹಾರಾಜರೇ, ನಾನೆಲ್ಲಿಗೆ ಹೋಗಬೇಕು?" ಎಂದು ಕೇಳಿದಳು.

ಈ ಸಮಯಕ್ಕೆ ಮಾನಸಿಂಹನ ಅಂತಃಕರಣದಲ್ಲಿ ಕ್ರೋಧಾಗ್ನಿಯು ಪ್ರಜ್ವಲಿತವಾಗಿತ್ತು. ಆದರೂ ಅವನು ಬಹಳೇ ಆತ್ಮಸಂಯಮನ ಮಾಡಿ ಕೊಂಡು ಶಾಂತ ಸ್ವರದಿಂದ "ಎಲ್ಲಿ ಹೋಗಬೇಕು? ಹಂ! ಈ ವಿಶಾಲ ವಾದ ವಿಶ್ವದಲ್ಲಿ ನಿನ್ನಂಥ ಪುಣ್ಯಶೀಲ ಪ್ರಾಣಿಗೆ ಇರಲಿಕ್ಕೆ ವಿಪುಲಸ್ಥಳ ವುಂಟು. ಭೂಮಾತಯು ನಿನ್ನಂಥವರ ಭಾರವನ್ನು ಸಹ ಉದಾರ ಬುದ್ಧಿ ಯಿಂದ ಧಾರಣಮಾಡುತ್ತಾಳೆ! ಇದಲ್ಲದೆ ನಾನಾಗಿ ನಿನ್ನನ್ನು ದೂರಮಾಡು ವದಿಲ್ಲ. ನೀನೇ ನಿನ್ನ ಗುಣದಿಂದ ಈ ಸ್ಥಿತಿಯನ್ನು ತಂದುಕೊಂಡಿ! ಸುಶೀಲೆ, ನಿನ್ನನ್ನು ನಾನು ಆದರದಿಂದಲೂ, ವಿಶ್ವಾಸದಿಂದಲೂ, ನನ್ನ ಹೃದಯವೆಂಬ ಪೆಟ್ಟಿಗೆಯೊಳಗೆ ಬಹಳ ಜಾಗ್ರತೆಯಿಂದ ಸಂಗ್ರಹಿಸಿಟ್ಟಿದ್ದೆನು! ಆದರೆ ನೀನು ನನಗೆ ಯೋಗ್ಯ ಪ್ರತಿಫಲವನ್ನು ಕೊಟ್ಟೆ. ಇರಲಿ, ನೀನು ನನ್ನಕೂಡ ಕೃತಘ್ನತೆಯಿಂದ ನಡೆದಾಗ್ಯೂ ನಾನು ನಿನ್ನಮೇಲೆ ದಯವನ್ನು ತೋರಿಸುತ್ತೇನೆ. ನಿನಗೆ ಕಠೋರಶಾಸನವನ್ನು ಮಾಡುವದಿಲ್ಲ. ನಿನ್ನನ್ನು ತಿರುಕಳ ಹಾಗೆ ಮಾಡುವದಿಲ್ಲ. ಹೊರಟುಹೋಗು. ರಾಜಪತ್ನಿಗೆ ಯೋಗ್ಯವಾಗುವಂಥ ಮರ್ಯಾದೆಯಿಂದ ನಿನ್ನನ್ನು ಕಳಿಸಿಕೊಡುತ್ತೇನೆ. ಈ ಹೊತ್ತು ರಾತ್ರಿ ನೀನು ಕಲ್ಯಾಣೇಶ್ವರನ ಮಂದಿರದಲ್ಲಿ ಹೋಗಿ ಇರು. ನಾಳೆ ಮುಂಜಾನೆ ಭೋಯಿಜನರು ಪಾಲಿಕೆಯನ್ನು ತೆಗೆದುಕೊಂಡು ಬರುವರು. ಅವರ ಸಂಗಡ ನೀನು ನಿನ್ನ ಮನಬಂದಲ್ಲಿ ಹೊರಟುಹೋಗು ನನ್ನ ರಾಜ್ಯದಲ್ಲಿ ಕ್ಷಣಹೊತ್ತು ಸಹ ನಿಂತುಕೊಳ್ಳಬೇಡ. ನಿನ್ನನ್ನು ಪಟ್ಟ ರಾಣಿಯಾಗಿ ಮಾಡಬೇಕೆಂದು ನನ್ನ ಇಚ್ಛೆಯು ಬಹಳವಿತ್ತು. ಆದರೆ ಆ ನನ್ನ ಮನಸ್ಸಿನೊಳಗಿನ ಮಂಡಿಗೆಯು ಮನಸ್ಸಿನಲ್ಲಿಯೇ ಕರಗಿಹೋಗಿ ಈಗ ನಿನ್ನನ್ನು ತ್ಯಾಗಮಾಡಬೇಕಾಯಿತು!" ಎಂದು ಮಾತಾಡಿ ಅಲ್ಲಿಂದ ಹೋಗಲಾರಂಭಿಸಿದನು.

ಆಗ ಸುಶೀಲೆಯು ಬಿಕ್ಕಿ ಬಿಕ್ಕಿ ಅತ್ತು "ಮಹಾರಾಜರೇ, ನಾನು ನಿಮ್ಮ ಮದುವೆಯ ಹೆಂಡತಿಯು"— ಎಂದಳು.

ಮಾನಸಿಂಹನು ಹೋಗ ಹೋಗುತ್ತ ಕಠೋರ ಹಾಸ್ಯವನ್ನು ಮಾಡಿ "ರಜ ಪುತ ರಾಜರಿಗೆ ಅನೇಕ ಮಂದಿ ಹೆಂಡಂದಿರು ಇರುತ್ತಾರೆ" ಎಂದು ನುಡಿದನು.

ಸುಶೀಲೆಯ ಮಸ್ತಕವು ಭ್ರಮಿಸಹತ್ತಿತು. ನಾನಾ ಪ್ರಕಾರದ ಚಿಂತೆಗಳು ಅವಳ ಮನಸ್ಸಿನಲ್ಲಿ ಉತ್ಪನ್ನವಾದವು. ಅವಳು ತನ್ನ ಹತ್ತರ ಇದ್ದ ಗಿಡದ ಬೊಡ್ಡೆಯನ್ನು ಹಿಡಿದುಕೊಂಡು ಹೌರಗೆ ಕೆಳಗೆ ಕುಳಿತಳು. ಸ್ವಲ್ಪ ಹೊತ್ತಿನ ಮೇಲೆ ಅವಳು ಎಚ್ಚರದ ಮೇಲೆ ಬಂದು ನೋಡಲಾಗಿ ತಾನೊಬ್ಬಳೇ ಆ ಭಯಂಕರವಾದ ಅಂಧಃಕಾರದಲ್ಲಿ ಇರುವದಾಗಿ ತಿಳಿಯ ಬಂತು. ಪಾಪ! ಸುಶೀಲೆಯು ವಿರಾಟವಿಶ್ವದಲ್ಲಿ ಘನಘೋರವಾದ ಅಂಧಃಕಾರದೊಳಗೆ ಒಂದು ರಾಜಮಾರ್ಗದ ಮೇಲೆ ನಿರಾಶ್ರಿತಳಾಗಿ ಬಿದ್ದಿದ್ದಳು. ಒಂದು ಕ್ಷಣದ ಹಿಂದೆ ರಾಣಿ ಆಗಿದ್ದವಳು ಈಗ ಓಣಿಯಲ್ಲಿ ಅಡ್ಡಾಡುವ ತಿರುಕಳಾದಳು. ತಿರುಕಳಿಗೆ ಇರಲಿಕ್ಕೆ ಒಂದು ಸ್ವಸ್ಥವಾದ ಸ್ಥಳವಾದರೂ ಇರುವದು. ಆದರೆ ಈಕೆಗೆ ಅದು ಸಹ ಗತಿ ಇದ್ದಿಲ್ಲ!

ಸುಶೀಲೆಯ ನಿಷ್ಪಾಪ-ಪವಿತ್ರ-ಸರಳ ಹೃದಯವನ್ನು ಕ್ರೋಧವೂ ಅಭಿಮಾನವೂ ಒಂದೇ ಕಾಲಕ್ಕೆ ಆಕ್ರಮಿಸಿದವು. ಆದ್ದರಿಂದ ಅವಳು ಕಂಗಾಲಿಗೆದ್ದ ನಾಗರಹಾವಿನಂತೆ ಫೂತ್ಕಾರವನ್ನು ಹೊರಡಿಸಿ ಅಳುತ್ತ ಅಳುತ್ತ ತನ್ನಷ್ಟಕ್ಕೆ "ಪ್ರಾಣನಾಥರೇ! ನೀವು ನನ್ನನ್ನು ತ್ಯಾಗಮಾಡುವ-ಥ ಅಪರಾಧವು ನನ್ನಿಂದ ಏನು ಘಟಿಸಿತು? ನೀವು ರಾಜರೂ ನ್ಯಾಯಕರ್ತರೂ ಇದ್ದು ವಿಚಾರಮಾಡದೆ ಯಾವ ದೋಷಕ್ಕಾಗಿ ನನ್ನನ್ನು ತ್ಯಜಿಸಿದಿರಿ? ನನ್ನ ಬಗ್ಗೆ ನಿಮ್ಮ ಮನಸ್ಸಿನಲ್ಲಿ ಯಾಕೆ ಅವಿಶ್ವಾಸವುಂಟಾಯಿತು? ವನವಿಹಾರ ಮಾಡುವ ಪಕ್ಷಿಯಂತೆ ಆಜನ್ಮ ಭೂಮಿಯ ಮೇಲೂ ನೀರಿನ ಮೇಲೂ ವನಗಳಲ್ಲಿಯೂ ಅರಣ್ಯದಲ್ಲಿಯೂ ನಿಶ್ಶಂಕವಾಗಿ ಭ್ರಮಣಮಾಡುವ ಆಶ್ರಮವಾಸಿ ಮುನಿಕನ್ಯೆಗೆ ರಾಣಿಯಾಗುವ ಸುಕೃತವು ಹೇಗೆ ಬಂದೀತು? ಅದರಲಿ, ನೀವು ನನ್ನ ಎಲ್ಲ ವೃತ್ತಾಂತವನ್ನು ಚನ್ನಾಗಿ ಕೇಳಿಕೊಳ್ಳಲಿಲ್ಲ. ಅದನ್ನು ನನಗೆ ಪೂರ್ಣವಾಗಿ ಹೇಳಿಗೊಡಲಿಲ್ಲ. ಪೂರ್ಣವಾಗಿ ವಿಚಾರಮಾಡಲಿಲ್ಲ. ವೃಥಾ ಸಂಶಯದಿಂದ ನನ್ನನ್ನು ಒಮ್ಮೆಲೆ ತ್ಯಾಗಮಾಡಿದಿರಿ. ನಾಥರೇ, ಇದು ನಿಮ್ಮ ದೋಷವಲ್ಲ. ನನ್ನ ಅದೃಷ್ಟದೋಷವು ಇರುತ್ತದೆ! ಈಶ್ವರನು ನಿಮಗೆ ಉದಂಡಾಯುಷ್ಯವನ್ನು ಕೊಟ್ಟು ಸುಖದಿಂದ ಇಡಲಿ! ಈ ಜಗತ್ತಿನಲ್ಲಿ ನನಗೆ ಯಾವ ತರದ ಆಶೆಯೂ ಉಳಿದಿಲ್ಲ. ನನ್ನ ಅಂತ್ಯ

ಕಾಲಕ್ಕೆ ನಿಮ್ಮ ಚರಣದರ್ಶನವು ಆಗಬೇಕೆಂಬದಿಷ್ಟೇ ನನ್ನ ಪ್ರಾರ್ಥನೆಯು. ನಾನು ಕಾಯಾ ವಾಚಾ ಮನಸ್ಸುಗಳಿಂದ ಪತಿವ್ರತೆಯು ಇದ್ದಲ್ಲಿ ಆ ಜಗನ್ಮಾತೆಯು ನನ್ನ ಈ ಕಡೇ ಅಪೇಕ್ಷೆಯನ್ನು ಪೂರ್ಣಮಾಡುವಳು." ಎಂದು ನುಡಿದಳು.

# ಭಾಗ ೧೨.

## ದೈವ ದುರ್ವಿಪಾಕವು.

ಪ್ರಿಯ ವಾಚಕರೇ! ಸುಶೀಲೆಯ ಸಂಗಡ ಸುಶೀಲೆಯನ್ನು ಕಳಿಸಲಿಕ್ಕೆ ಹೋದ ಚಂಪಾವತಿಯು ಎಲ್ಲಿ ಅದೃಶ್ಯಳಾದಳು? ಸುಶೀಲೆಯ ವಿರಾಮ ಮಂದಿರದಿಂದ ಸುಶೀಲೆಯು ನಿರೂಪವನ್ನು ತೆಗೆದುಕೊಂಡು ಬಾದಶಹನ ಅಪ್ಪಣೆಯ ಮೇರೆಗೆ ಯುದ್ಧದ ವ್ಯವಸ್ಥೆಯನ್ನು ಮಾಡಲಿಕ್ಕೆ ದಿಲ್ಲಿಗೆ ಹೊರಟುಹೋದ ಮಾನಸಿಂಹನು ಅಂಬರಕ್ಕೆ ಯಾವಾಗ ಮರಳಿ ಬಂದನು? ಹಾಗೂ ಸುಶೀಲೆಯು ಶಿವಮಂದಿರಕ್ಕೆ ಒಬ್ಬ ತರುಣ ಬ್ರಾಹ್ಮಣ ಕುಮಾರನಿಗೆ ಏಕಾಂತ ಬೆಟ್ಟಿಯನ್ನು ಕೊಡಲಿಕ್ಕೆ ಹೋದದ್ದು ಮಾನಸಿಂಹನಿಗೆ ಹೇಗೆ ಗೊತ್ತಾಯಿತು? ಎಂಬ ಸಂಗತಿಗಳನ್ನು ತಿಳಿದುಕೊಳ್ಳಲಿಕ್ಕೆ ನೀವು ಉತ್ಸುಕರಾಗಿರಬಹುದು. ಆದ್ದರಿಂದ ನಿಮ್ಮ ಜಿಜ್ಞಾಸೆಯನ್ನು ಮೊದಲಿಗೆ ತೃಪ್ತಪಡಿಸಿ ಮುಂದಿನ ಕಥೆಗೆ ತೆರಳುತ್ತೇವೆ. ಅದರ ವಿವರವೇನಂದರೆ: ದುಷ್ಟೆಯಾದ ಚಂಪಾವತಿಯು ಸುಶೀಲೆಯನ್ನು ಶಿವಮಂದಿರದ ತನಕ ಕಳಿಸಿ ತಾನು ಓರಿಗೆ ನಿಂತು ಮಹೇಶನ ಮತ್ತು ಸುಶೀಲೆಯ ಭಾಷಣವನ್ನು ಸ್ವಲ್ಪ ಕೇಳಿಕೊಂಡು ಅವರ ಪಾರಪತ್ಯವನ್ನು ಮಾಡಿಸುವ ಉದ್ದೇಶದಿಂದ ಈ ಸುದ್ದಿಯನ್ನು ಕಮಲಕುಮಾರಿಗೆ ತಿಳಿಸುವುದಕ್ಕೆ ಓಡಿ ಬರುತ್ತಿದ್ದಳು. ಆ ಸಮಯಕ್ಕೆ ಮಾನಸಿಂಹನು ಕೆಲವು ಮಹತ್ವದ ರಾಜಕಾರಣದಗೋಸ್ಕರ ತನ್ನ ನಗರದಿಂದ ೩-೪ ಹರದಾರಿಯ ಮೇಲೆ ತನ್ನ ಸೈನ್ಯಸಮೇತವಾಗಿ ಇಳಿದುಕೊಂಡಿದ್ದ ಪಾಳ್ಯದಿಂದ ಗುಪ್ತವೇಷವನ್ನು ಧರಿಸಿ ನಗರಕ್ಕೆ ಬಂದು ಸುಶೀಲೆಯ ಮಂದಿರಕ್ಕೆ ಹೋದನು ಅಲ್ಲಿ ಸುಶೀಲೆಯೂ ಇದ್ದಿಲ್ಲ. ಅವಳ ದಾಸಿ

ಯಾದ ಚಂಪಾವತಿಯೂ ಇದ್ದಿಲ್ಲ. ಸುಶೀಲೆಯ ಅಂತಃಪುರದ ಗುಪ್ತ ಬಾಗಿಲವು ಮಾತ್ರ ತೆರೆದಿತ್ತು. ಆಗ ಅವನು ಸಂಶಯದಿಂದ ಸುಶೀಲೆಯನ್ನೂ ಚಂಪಾವತಿಯನ್ನೂ ಶೋಧಿಸುತ್ತ ಅರಮನೆಯ ಸಮೀಪದಲ್ಲಿ ಅಡ್ಡಾಡುತ್ತಿರಲು ಚಂಪಾವತಿಯು ಓಡಿ ಬರುತ್ತಿರುವದನ್ನು ಕಂಡನು. ಮಾನಸಿಂಹನ ಸಂಶಯವು ಮತ್ತಿಷ್ಟು ಹೆಚ್ಚಾಯಿತು. ಮಾನಸಿಂಹನು ಕ್ರೋಧಾವೇಶದಿಂದ "ಚಂಪಾವತೀ, ಇಂಥ ಭಯಂಕರವಾದ ರಾತ್ರಿಯಲ್ಲಿ ಕಳ್ಳಿಯಂತೆ ಯಾಕೆ ಓಡಿ ಬರುತ್ತಿರುವಿ? ನಿನ್ನ ಒಡತಿಯಾದ ಸುಶೀಲೆಯು ಎಲ್ಲಿ? ಸುಶೀಲೆಯ ಅಂತಃಪುರದ ಗುಪ್ತ ದ್ವಾರವನ್ನು ಯಾವ ದುಷ್ಟರು ತೆರೆದಿರುವರು?" ಎಂದು ಗದ್ದರಿಸಿ ಕೇಳಿದನು. ಚಂಪಾವತಿಯು ಮುಂಚೆ ಸ್ವಲ್ಪ ಹೊತ್ತು ಉತ್ತರಕೊಡದೆ ಮೌನದಿಂದಿದ್ದಳು. ಮುಂದೆ ಆ ದುಷ್ಟೆಯು ಧೈರ್ಯಮಾಡಿ "ಅವರು ಶಿವಮಂದಿರಕ್ಕೆ ಹೋಗಿರುವರು ನನಗೆ ಮುಂದೆ ಹೋಗಿ ಅಂತಃಪುರದ ಬಾಗಿಲದ ಹತ್ತರ ನಿಂತುಕೊಳ್ಳಲಿಕ್ಕೆ ಅಪ್ಪಣೆಯನ್ನು ಮಾಡಿದ್ದರಿಂದ ನಾನು ಓಡಿ ಬಂದೆನು." ಎಂದು ಹೇಳಿದಳು.

ಸುಶೀಲೆಯು ಇಂಥ ಘೋರವಾದ ರಾತ್ರಿಯಲ್ಲಿ ದಾಸಿಯನ್ನು ಮುಂದಕ್ಕೆ ಕಳಿಸಿ ತಾನೊಬ್ಬಳೇ ಶಿವಮಂದಿರದಲ್ಲಿ ಉಳಿದಳೆಂಬುವದನ್ನು ಕೇಳಿದ ಕೂಡಲೆ ಅವನ ಪಿತ್ತವು ನೆತ್ತಿಗೇರಿ ಹೋಯಿತು! ಅವನು ಒಮ್ಮೆಲೆ ಅಂತಃಪುರದ ಗುಪ್ತಬಾಗಿಲವನ್ನು ಮುಚ್ಚಿಕೊಂಡು ಚಂಪಾವತಿಗೆ ಈ ಸಂಗತಿಯನ್ನು ಯಾರ ಮುಂದೂ ಉಸುರಬಾರದೆಂದು ಕಟ್ಟಪ್ಪಣೆಯನ್ನು ಮಾಡಿ ಶಿವಮಂದಿರದ ಕಡೆಗೆ ಹೊರಟುಬಂದನು. ಅಲ್ಲಿ ಬಂದು ನೋಡುವಷ್ಟರಲ್ಲಿ ಕತ್ತಲೊಳಗೆ ಯಾರೋ ಇಬ್ಬರು ಗುಜುಗುಜು ಮಾತಾಡುವದನ್ನು ಕೇಳಿ, ಅವರೊಳಗೆ ಒಬ್ಬಳು ತನ್ನ ಪ್ರಿಯಪತ್ನಿಯಾದ ಸುಶೀಲೆಯಂತಲೂ ಎರಡನೆಯವನು ಒಬ್ಬ ತರುಣ ಪುರುಷನಂತಲೂ ಮನಗಂಡನು ಇದಲ್ಲದೆ ಸುಶೀಲೆಯು "ನಾನು ನಿರಂತರವಾಗಿ ನಿಮ್ಮವಳೇ ಇದ್ದೇನೆ." ಎಂದು ಹೇಳುವದನ್ನು ಪ್ರತ್ಯಕ್ಷವಾಗಿ ಕೇಳಿದನು. ಮುಂದೆ ಕೇಳುವದೇನದೆ? "ನಿದ್ರೆ ಬಂದವನಿಗೆ ಹಾಸಿಗೆ ಮಾಡಿಕೊಟ್ಟಂತೆ" ಮೊದಲೇ ಸಂಶಯದಿಂದ ಕುದಿಯುತ್ತಿದ್ದ ಮಾನಸಿಂಹನಿಗೆ ಮತ್ತಿಷ್ಟು ಬಲವು ಬಂತು. ಅವರ ಮುಂದಿನ

ಭಾಷಣವನ್ನು ಮಾನಸಿಂಹನಿಗೆ ಕೇಳಲಿಕ್ಕಾಗಲಿಲ್ಲ. ಅವನ ಮಸ್ತಕವು ಭ್ರಮಣವಾಯಿತು ಮುಂದೆ ನಡೆದ ಪ್ರಕಾರವನ್ನು ಹಿಂದಿನ ಭಾಗದಲ್ಲಿಯೇ ತಿಳಿಸಿರುತ್ತೇವೆ. ಆದ್ದರಿಂದ ವಾಚಕರೇ! ಇನ್ನು ಮುಂದೆ ಘೋರಾರಣ್ಯದಲ್ಲಿ ಘೋರವಾದ ರಾತ್ರಿಯೊಳಗೆ ಅನಾಥಳಾಗಿ ಕುಳಿತು ದುಃಖಪಡುತ್ತಿರುವ ಸುಶೀಲೆಯ ಸಮಾಚಾರವನ್ನು ತಗೆದುಕೊಳ್ಳಲಿಕ್ಕೆ ಹೋಗುವಾ ನಡೆಯಿರಿ.

ಮೇಲೆ ನೀಲವರ್ಣದ ಆಕಾಶದಲ್ಲಿ ಅಸಂಖ್ಯ ತಾರೆಗಳು ಕ್ಷೀಣವಾಗಿ ಲಕಲಕವೆಂದು ಹೊಳೆಯುತ್ತಿದ್ದವು. ಗಿಡದ ಮೇಲೆ ಅಲ್ಲಲ್ಲಿ ಹೊನ್ನಿಯ ಹುಳಗಳು ಚಮಕಿಸುತ್ತ ಹಾರಾಡುತ್ತಿದ್ದವು. ರಾತ್ರಿಯ ಗಾಳಿಯು ಮಂದ ಗತಿಯಿಂದ ಬೀಸುತ್ತಿತ್ತು. ಆ ಸಮಯಕ್ಕೆ ಸೂ ಸೂ ಎಂದು ಗಾಳಿಯ ಹಾರಗಿನ ಸಪ್ಪಳವು ಕೇಳಿಸುತ್ತಿತ್ತಲ್ಲದೆ ಉಳಿದದ್ದೆಲ್ಲ ಯಾವತ್ತು ಕಡೆಗೆ ಸ್ತಬ್ಧವಾಗಿಯೂ ಶಾಂತವಾಗಿಯೂ ಇತ್ತು. ಇಂಥ ಘೋರವಾದ ರಾತ್ರಿಯಲ್ಲಿ ನಗರದಿಂದ ದೂರವಾಗಿ ಬಂದು ಭಯೋತ್ಪನ್ನವಾಗುವ ಮಾರ್ಗದಲ್ಲಿ ಗಿಡಗಂಟಿಗಳ ಗುಂಪಿನೊಳಗೆ ಸುಶೀಲೆಯು ಒಬ್ಬಳೇ ಚಿಂತಾಮಗ್ನಳಾಗಿ ಕುಳಿತಿದ್ದಳು. ರಾತ್ರಿಯು ಮೆಲ್ಲಮೆಲ್ಲನೆ ಮುಗಿಯುತ್ತ ಬಂದಿತ್ತು. ಆದರೆ ಸುಶೀಲೆಯ ಚಿಂತೆಯು ಮಾತ್ರ ಮುಗಿದಿದ್ದಿಲ್ಲ. ಅದು ಹೆಚ್ಚೆಚ್ಚು ಆಗುತ್ತ ನಡೆದಿತ್ತು ಏನು ಮಾಡಬೇಕು? ಎಲ್ಲಿ ಹೋಗಬೇಕು? ಎಂಬದು ಆಕೆಗೆ ತಿಳಿಯದಂತಾಗಿತ್ತು. ಇಂಥ ಸ್ಥಿತಿಯಲ್ಲಿಯೇ ಆ ಬಡಪ್ರಾಣಿಯು ಮುಗ್ಗಡಿಸುತ್ತ ಎದ್ದು, ಎಡವುತ್ತ, ಬೀಳುತ್ತ, ನಡೆಯಲಾರಂಭಿಸಿದಳು. ತಾನು ಮುಂದೆ ಹೋಗುವದೆಲ್ಲಿ ಮತ್ತು ಮಾಡುವದೇನು ಎಂಬುವದು ಆ ಪ್ರಾಣಿಗೆ ತಿಳಿಯದೆ ಹೋಗಿ ಕಾಲು ಒಯ್ದ ಕಡೆಗೆ ಮತ್ತು ಕಣ್ಣು ತೋರಿಸಿದ ಕಡೆಗೆ ಗಾಳಿಯ ಹೆಣದಂತೆ ನಡೆದಿದ್ದಳು. ಆಕೆಯ ಕೋಮಲವಾದ ಪಾದಗಳಲ್ಲಿ ಮುಳ್ಳು, ಕಲ್ಲುಗಳು ನಡುತ್ತಿದ್ದವು. ಪಾದಗಳಲ್ಲಿ ರಕ್ತವು ಚಿಮ್ಮುತ್ತಿತ್ತು. ಆದರೆ ಸುಶೀಲೆಯ ಬುದ್ಧಿಭ್ರಮಣವಾದ್ದರಿಂದ ಆಕೆಯ ಲಕ್ಷ್ಯವು ಅದರ ಕಡೆಗೆ ಏನೂ ಇದ್ದಿಲ್ಲ. ಆಕೆಯ ತಲೆಯು ಒಂದೇಸವನೆ ಭ್ರಮಣ ಮಾಡುತ್ತಿದ್ದದರಿಂದ ಆಕೆಯ ಕಾಲುಗಳು ಒತ್ತರದಿಂದ ನಡೆಯುವ ಕೆಲಸವನ್ನು ಮಾತ್ರ ನಡೆಯಿಸಿದ್ದವು.

ಅಂಬರದ ಅಂತಃಪುರದ ವಿಷಯವಾಗಿ ಮನಸ್ಸಿನಲ್ಲಿ ವಿಚಾರವು ಬರುತ್ತಲೆ ಆಕೆಯ ಕಣ್ಣೊಳಗಿನ ನೀರು ತೆರಪಿಲ್ಲದೆ ಸುರಿಯುತಿದ್ದವು. "ಛೀ! ಇಷ್ಟು ಕ್ರೂರ ಮತ್ತು ನಿಷ್ಠುರರಾದವರ ಬಗ್ಗೆ ನನ್ನ ಮನಸ್ಸಿನಲ್ಲಿ ಯಾಕೆ ವಿಚಾರಗಳು ಬರಬೇಕು? ಇನ್ನು ಮುಂದೆ ಅಂತಃಪುರವನ್ನು ಕಣ್ಣಿಂದ ಸಹ ನೋಡಲಾರೆನು ಆದರೆ ಇಷ್ಟು ರಾತ್ರಿಯಲ್ಲಿ ನಾನು ಎಲ್ಲಿ ಹೋಗಲಿ? ಪಿತನ ಆಶ್ರಮಕ್ಕಾದರೂ ಹೋದೇನಂದರೆ, ಪಿತನು ಹೇಳಿ ಕೇಳಿ ಸನ್ಯಾಸಿಯು ಅವನು ಆಶ್ರಮದಲ್ಲಿರುತ್ತಾನೋ ತೀರ್ಥಯಾತ್ರೆಗೆ ಹೊರಟು ಹೋಗಿರುತ್ತಾನೋ ಪರಮೇಶ್ವರನೇ ಬಲ್ಲನು! ಆತನು ಅಲ್ಲಿ ಇರುವದು ನಿಶ್ಚಯವಿಲ್ಲದಿದ್ದರೂ ನಾನು ಒಂದುವೇಳೆ ಆಶ್ರಮಕ್ಕೆ ಹೋದರೆ ಅಲ್ಲಿಯ ಸುಂದರ ಪರ್ಣಕುಟಿಯನ್ನೂ, ಸುಂದರವಾದ ಹೂದೋಟವನ್ನೂ, ರಮಣೀಯವಾದ ಪುಷ್ಕರಣಿಯನ್ನೂ ನೋಡುತ್ತ ಸಮಾಧಾನದಿಂದ ವೇಳೆಯನು ಕಳೆದೇನು. ಆದರೆ ಆಶ್ರಮದ ಮಾರ್ಗವು ನನಗೆಲ್ಲಿ ಗೊತ್ತಿದೆ? ಅದನ್ನು ನನಗೆ ತೋರಿಸುವವರು ಯಾರು?" ಎಂದು ನುಡಿಯುತ್ತ ಸಿರಾಶೆಪಟ್ಟು ಬಹಳೇ ಅಳಲಾರಂಭಿಸಿದಳು.

ಈ ಪ್ರಕಾರ ಸುಶೀಲೆಯು ಕೆಲವು ಹೊತ್ತು ಮನದಣಿಯುವಂತೆ ಅತ್ತು ತಾನೇ ಪುನಃ ಸಮಾಧಾನಪಟ್ಟುಕೊಂಡು ಯಾವದಾದರೂ ದೇವರ ಗುಡಿಯಲ್ಲಿ ಹೋಗಿಸಿಂತು ದೇವರ ಸೇವೆಯಲ್ಲಿ ತನ್ನ ಆಯುಷ್ಯವನ್ನು ಕಳೆಯಬೇಕೆಂಬದಾಗಿ ಆಲೋಚನೆ ಮಾಡಿದಳು. ಆದರೆ ಒಮ್ಮೆಲೆ "ಅಲ್ಲಿಯೂ ನನ್ನ ಅದೃಷ್ಟವು ನನ್ನನ್ನು ಕಾಡದೆ ಬಿಡಲಿಕ್ಕಿಲ್ಲ. ನನ್ನ ಸುಂದರ ರೂಪವು ನನಗೆ ವೈರಿಯಾಗಿಯೇ ಬೆನ್ನು ಹತ್ತಿರುತ್ತದೆ. ದೇವರು ನನ್ನನ್ನು ಒಂದುವೇಳೆ ಕುರೂಪಿಯಾಗಿ ಮಾಡಿದ್ದರೆ ಲೇಸಾಗುತ್ತಿತ್ತು." ಎಂದು ಪುನಃ ಆಕೆಯ ಮನಸ್ಸಿನಲ್ಲಿ ವಿಚಾರವು ಬರಲಾಗಿ ಅದನ್ನು ಬಿಟ್ಟು ನಿರಾಧಾರಿಯೂ ನಿರಾಶ್ರಿತಳೂ ಆದ ಮಾನಸಿಂಹನ ಅರ್ಧಾಂಗಿಯು ತಾನು ಉಟ್ಟ ಒಂದೇ ವಸ್ತ್ರದಿಂದ ಮಹಾಸತಿಯಾದ ದಮಯಂತಿಯಂತೆ ನಿರ್ಜನವಾದ ಅರಣ್ಯದಲ್ಲಿ ಹೋಗಿ ಬಿದ್ದಳು. ಆಯ್ಯೋ ವಿಧಿಯೇ! ಏನು ದೈವ ದುರ್ವಿಪಾಕವಿದು!

# ಭಾಗ ೧೩.

## ನೀರೊಳಗೆ ಹಾರಿಕೊಂಡಳು.

ಕಠೋರ ಹೃದಯನಾದ ಮಾನಸಿಂಹನು ಸುಶೀಲೆಯು ಕಲಂಕಿತ ಆಚರಣವನ್ನು ಕಂಡು ಕೃದ್ಧನಾಗಿ ಅವಳನ್ನು ನಿರಾಶ್ರಿತಳಾಗಿ ಮಾಡಿ ತಾನೂ ತಿರುಗಿ ನಗರಕ್ಕೆ ಹೋಗದೆ, ತನ್ನ ಸೈನ್ಯಸಮೇತನಾಗಿ ಅಲ್ಲಲ್ಲಿ ಇಳಿದು ಕೊಳ್ಳುತ್ತ ದಿಲ್ಲಿಯ ಕಡೆಗೆ ಹೊರಟುಹೋದನು. ಆದರೂ ಅವನು ಸುಶೀಲೆಗೆ ಹೇಳಿದಂತೆ ಮರುದಿವಸ ಮುಂಜಾನೆ ಸುಶೀಲೆಯು ಕಡೆಗೆ ಹತ್ತು ಸಾವಿರ ಮೋಹರುಗಳನ್ನೂ ಪಲ್ಲಕ್ಕಿಯನ್ನೂ ಅದರ ವಾಹಕರಾದ ನಾಲ್ಕು ಮಂದಿ ಭೊಯಿಾ ಜನರನ್ನೂ ಕಲ್ಮಾಣೇಶ್ವರನ ಮಂದಿರಕ್ಕೆ ಕಳಿಸಿಕೊಟ್ಟನು. ಆ ಜನರು ಅಲ್ಲಿಗೆ ಹೋಗಿ ಹುಡುಕಿ "ರಾಣೀಸಾಹೇಬರು ಅಲ್ಲಿ ಇಲ್ಲ"ವೆಂದು ಮಾನಸಿಂಹನ ಬಳಿಗೆ ತಿರುಗಿ ಬಂದು ಅವನ ಮುಂದೆ ಸುದ್ದಿಯನ್ನು ತಿಳಿಸಿದರು. ಅದಕ್ಕೆ ಅವನು ವಿಶೇಷ ಲಕ್ಷಿಸದೆ ತನ್ನ ಮನಸ್ಸನ್ನು ಲಷ್ಕರಿಯು ಕವಾಯತಿನಲ್ಲಿಯೂ ರಾಜಕಾರಣದಲ್ಲಿಯೂ ಮುತ್ತಿಗೆಯು ಆಲೋಚನೆಗಳಲ್ಲಿಯೂ ತೊಡಗಿಸಲಿಕ್ಕೆ ಪ್ರಯತ್ನ ಮಾಡಲಾರಂಭಿಸಿದನು ಮೊದಮೊದಲಿಗೆ ಅವನ ಪ್ರಯತ್ನವು ಸಫಲವಾಗಲಿಲ್ಲ. ಅವನ ಮನಸ್ಸಿಗೆ ಬಹಳ ವ್ಯಥೆಯಾಗಹತ್ತಿತು. ದಿವಸಗಳು ಹೋದ ಹೋದ ಹಾಗೆ ಅವನು ಯಾವತ್ತು ಸಂಗತಿಗಳನ್ನು ಮರೆತುಬಿಟ್ಟನು. ಆದರೆ ಅವನಿಗೆ ಸುಶೀಲೆಯ ಸುಂದರ ಮತ್ತು ಮೋಹಕ ಮುಖಕಮಲವನ್ನು ಮರೆಯಲಿಕ್ಕಾಗಲಿಲ್ಲ. ಅವಳ ಕಲಂಕಿತ ಆಚರಣವನ್ನು ಸಹ ಮರೆಯಲಿಕ್ಕಾಗಲಿಲ್ಲ. ಸುಂದರಿಯ ಲೋಕೋತ್ತರ ಲಾವಣ್ಯವು ನೆನಪಾದ ಕೂಡಲೆ ಅವನು ಅವಳಲ್ಲಿ ಅನುರಾಗಪಟ್ಟು ಸಂತೋಷ ಹೊಂದುತ್ತಿದ್ದನು ಅವಳ ಕಲಂಕಿತ ಆಚರಣವು ನೆನಪಾದ ಕೂಡಲೆ ಅವನು ಬಹಳ ವ್ಯಥೆಯನ್ನು ಪಡುತ್ತಿದ್ದನು. ಮತ್ತೆ ಕ್ರೋಧವನ್ನು ತಾಳುತ್ತಿದ್ದನು

ಮಾನಸಿಂಹನ ಪಾಪಿಷ್ಠ ರಾಜ್ಯದಲ್ಲಿ ಇನ್ನು ಮುಂದೆ ಒಂದು ಕ್ಷಣ ಹೊತ್ತು ಸಹ ಇರಲಿಕ್ಕಿಲ್ಲವೆಂದು ದೃಢನಿಶ್ಚಯ ಮಾಡಿದ ಅಭಿಮಾನಶಾಲಿ

ಯಾದ ಸುಶೀಲೆಯು ಭಯಂಕರವಾದ ರಾತ್ರಿಯೊಳಗೆ ಗಾಢಾಂಧಃಕಾರದಲ್ಲಿ ಮುಂದಗತಿಯಿಂದ ನಡೆದಳು. ಆದರೆ ಸುಕುಮಾರೆಯು ದಾರಿಯನ್ನು ನಡೆದ್ದರಿಂದ ಬೇಗನೆ ದಣಿದು ಮುಂದೆ ನಡಿಯಲಿಕ್ಕೆ ಶಕ್ತಿಯು ಇಲ್ಲದ್ದರಿಂದ ನಿರುಪಾಯಳಾಗಿ ಒಂದು ಗಿಡದ ಕೆಳಗೆ ಕುಳಿತಳು.

ಈ ಕಾಲಕ್ಕೆ ಆಕಾಶದಲ್ಲಿಯ ನಕ್ಷತ್ರಗಳ ಜ್ಯೋತಿಯು ತೀರಾ ಕ್ಷೀಣವಾಗಿತ್ತು. ಉಷಃಕಾಲದ ಶೀತಲ ವಾಯುವು ಕಸುಪಿನಿಂದ ಬೀಸಲಾರಂಭಿಸಿತ್ತು. ಪೂರ್ವದಿಶೆಯು ಹೆಚ್ಚೆಚ್ಚು ಉಜ್ವಲವಾಗಲಿಕ್ಕೆ ಹತ್ತಿತ್ತು. ಗಿಡಗಳ ಜುಡುಪಿನಲ್ಲಿ ಪಕ್ಷಿಗಳ ಕಿಲಕಿಲಾಟ ಧ್ವನಿಯು ಆರಂಭವಾಗಿತ್ತು. ನಿದ್ರೆಯನ್ನು ಮಾಡಿ ವಿಶ್ರಾಂತಿಪಟ್ಟ ಜನರು ಪ್ರಫುಲ್ಲಿತ ಚಿತ್ತದಿಂದ ತಮ್ಮ ನಿತ್ಯ ಕ್ರಮಕ್ಕೆ ತೊಡಗಿದ್ದರು. ಲತಾತರುಗಳಲ್ಲಿ ಈಗೀಗ ವಿಕಸಿತವಾಗಲಾರಂಭಿಸಿದ್ದ ಸುಗಂಧ ಪುಷ್ಪಗಳ ಮಧುರ ಸುವಾಸನೆಯಿಂದ ದಶದಿಶೆಗಳು ತುಂಬಿಹೋಗಿದ್ದವು. ಈ ರಮಣೀಯವಾದ ನೋಟವನ್ನು ನೋಡಿ ಸುಶೀಲೆಯ ಉದ್ವಿಗ್ನವಾದ ಮನಸ್ಸು ಕಿಂಚಿತ್ತು ಸಮಾಧಾನವನ್ನು ಹೊಂದಲು ಅವಳು ಜಗನ್ನಿಯಂತ್ಯನಾದ ಪರಮೇಶ್ವರನನ್ನು ಧ್ಯಾನಮಾಡಿ ಸದ್ಗದಿತ ಸ್ವರದಿಂದ “ದಯಾನಿಧಿಯಾದ ಪ್ರಭುವೇ! ಈ ಸಂಸಾರದಲ್ಲಿಯ ನನ್ನ ಸಕಲ ಸುಖವು ನಷ್ಟವಾಯಿತು. ಇನ್ನು ಮುಂದೆ ನನಗೆ ಯಾವ ತರದ ಆಶೆಯೂ ಉಳಿದಿಲ್ಲ. ಉಲ್ಲಾಸವೂ ಉಳಿದಿಲ್ಲ. ಯಾರ ಆಧಾರವೂ ಉಳಿದಿಲ್ಲ. ಈ ಹತಭಾಗ್ಯ ಜೀವದ ಭಾರವನ್ನು ಹೊತ್ತುಕೊಂಡು ನಾನು ಎಲ್ಲಿ ಅಡ್ಡಾಡಲಿ? ರಾತ್ರಿಯಲ್ಲಿ ಕತ್ತಲವು ನನ್ನನ್ನು ಹೇಗಾದರೂ ಮಾಡಿ ಸಂರಕ್ಷಿಸಿತು. ಈ ಬೆಳಕಿನಲ್ಲಿ ಈ ನನ್ನ ಸುಟ್ಟ ಸೌಂದರ್ಯವನ್ನು ಎಲ್ಲಿ ಅಡಗಿಸಿಟ್ಟು ಬರಲಿ? ದೀನದಯಾಳುವೇ! ಅನಾಥರಕ್ಷಕನೇ! ನಿನ್ನ ಹೊರತು ನನಗೆ ಯಾರೂ ರಕ್ಷಕರಿಲ್ಲ. ನಿನ್ನ ಚರಣದ ಹತ್ತರ ಸ್ಥಳವನ್ನು ಕೊಟ್ಟು ನನ್ನನ್ನು ರಕ್ಷಿಸು” ಎಂದು ಪ್ರಾರ್ಥಿಸಿದಳು.

ಈಶ್ವರನನ್ನು ಈ ಪ್ರಕಾರ ಪ್ರಾರ್ಥಿಸಿದ ತರುವಾಯ ಸುಶೀಲೆಯಲ್ಲಿ ಬಹಳ ಧೈರ್ಯವೂ ವಿಶ್ವಾಸವೂ ಹುಟ್ಟಿದವು. ಆ ಮೇಲೆ ಅವಳು ತನ್ನ ದೃಷ್ಟಿಯನ್ನು ಕೆಳಗೆ ಮಾಡಲು ಸಮಿಾಪದಲ್ಲಿಯೇ ನಿರ್ಮಲ ಜಲದಿಂದ

ಓತಪ್ರೋತ ತುಂಬಿದ್ದ ಸರೋವರವು ಅವಳ ಕಣ್ಣಿಗೆ ಕಂಡಿತು. ಹಿಂದ ಕ್ಕೊಮ್ಮೆ ಸುಶೀಲೆಯು ದುಃಖಮುಕ್ತಳಾಗಲಿಕ್ಕೆ ನೀರೊಳಗೆ ಮುಳುಗಲು ಪ್ರಯತ್ನಮಾಡಿದ್ದಳು. ಆದರೆ ಆ ದಿವಸ ಅವಳ ಹತ್ತರ ಮಹೇಶನು ಇದ್ದ ದ್ದರಿಂದ ಅವಳ ಇಚ್ಛೆಯು ಸಫಲವಾಗಿದ್ದಿಲ್ಲ. ಈ ದಿವಸ ತನ್ನ ಹತ್ತರ ತನ್ನ ಹಂಚಿಕೆಗೆ ಅಡ್ಡ ಬರತಕ್ಕವರು ಯಾರೂ ಇಲ್ಲದ್ದರಿಂದ ಅವಳು ಬಹಳ ಹರ್ಷಪಟ್ಟು ತನ್ನ ಸಂತಪ್ತವಾದ ಜೀವನವನ್ನು ಪುಣ್ಯವಾದ ಜಲದಲ್ಲಿ ನಿರಂತ ರವಾಗಿ ಶಾಂತಗೊಳಿಸಬೇಕೆಂದು ನಿಶ್ಚಯಮಾಡಿ ಮೆಲ್ಲನೆ ಎದ್ದು ತತ್ತರಿ ಸುತ್ತ ಮುಂದಕ್ಕೆ ಹೋಗಿ ಸರೋವರದ ಎತ್ತರವಾದ ದಂಡೆಯ ಮೇಲೆ ನಿಂತು ಕಣ್ಣುಮುಚ್ಚಿಕೊಂಡು ಎರಡೂ ಕೈಮುಗಿದು "ಪರಮೇಶ್ವರಾ! ಆತ್ಮಹತ್ಯ ಮಾಡುವದು ಪಾತಕವೆಂದು ಶಾಸ್ತ್ರಗಳು ಹೇಳುವವು. ಆದರೆ ಸ್ತ್ರೀಧರ್ಮವನ್ನು ರಕ್ಷಣಮಾಡಿಕೊಳ್ಳುವದು ಆರ್ಯಸ್ತ್ರೀಯ ಪರಮ ಪವಿ ತ್ರವಾದ ಕರ್ತವ್ಯವಾಗಿರುವದರಿಂದ ನಾನು ಈ ಸಾಹಸವನ್ನು ಮಾಡಿ ನಿನ್ನ ಚರಣಸನ್ನಿಧಿಯಲ್ಲಿ ಬರುತ್ತೇನೆ. ಇದರಿಂದ ಏನಾದರೂ ಪಾತಕವು ಸಂಭ ವಿಸುತ್ತಿದ್ದಲ್ಲಿ ನನ್ನನ್ನು ಕ್ಷಮಿಸಿ ನನಗೆ ಆಶ್ರಯ ಕೊಡು" ಎಂದು ಬೇಡಿ ಕೊಂಡು ಧುಪ್ಪನೆ ನೀರೊಳಗೆ ಹಾರಿಕೊಂಡಳು ಅದೇ ಸಮಯದಲ್ಲಿ ಇನ್ನೊಬ್ಬರು ಯಾರೋ ನೀರೊಳಗೆ ಹಾರಿಕೊಂಡ ಸಪ್ಪಳವು ಕೇಳಿಸಿತು.

## ಭಾಗ ೧೪.

### ಎಲ್ಲಿಯೋ ಹೊರಟುಹೋದಳು.

ರಾತ್ರಿಯು ಮುಗಿದುಹೋಯಿತು. ಸೂರ್ಯನ ಸುವರ್ಣರಂಜಿತ ಕಿರಣವು ನಿತ್ಯ ಸಾಂಪ್ರದಾಯದಂತೆ ಜಗತ್ತಿನ ಶೋಭೆಯನ್ನು ವೃದ್ಧಿಂಗತ ಮಾಡಲಾರಂಭಿಸಿತು. ಒಂದು ವಿಶಾಲವಾದ ವಾಳ್ಯದ ಒಂದು ಸುಂದರ ವಾದ ಡೇರೆಯೊಳಗಿನ ಏಕಾಂತ ಸ್ಥಳದಲ್ಲಿ ಸುಶೀಲೆಯ ಅಚ್ಚ ಕರೇಬಣ್ಣದ ಅತಿ ಉದ್ದವಾದ ಸುಂದರ ಕೂದಲುಗಳು ಮೃದು ಮಂದವಾದ ಗಾಳಿ ಯಿಂದ ಸುಳಿದಾಡಹತ್ತಿದವು. ಡೇರೆಯ ಪ್ರವೇಶಮಾಡಿದ ದಿನಮಣಿಯ

ಪ್ರಕಾಶಕಿರಣವು ಆಕೆಯ ಸುಂದರವಾದ ಮುಖದ ಮೇಲೆ ಬಿದ್ದು ಆ ಮುಖದ ಪ್ರಭೆಯನ್ನು ಹೆಚ್ಚೆಚ್ಚು ಉಜ್ವಲಮಾಡಹತ್ತಿತು. ಸುಶೀಲೆಯು ಮೆಲ್ಲಮೆಲ್ಲನೆ ಕಣ್ಣು ತೆರೆದು ವಿಸ್ಮಯದಿಂದ ನಾಲ್ಕೂ ಕಡೆಗೆ ನೋಡಹತ್ತಿದಳು. ಆಕೆಗೆ ಹಿಂದಿನ ರಾತ್ರಿಯಲ್ಲಿ ವರ್ತಿಸಿದ ಸಂಗತಿಗಳೆಲ್ಲ ಒಂದರ ಹಿಂದೊಂದು ನೆನಪಾಗಹತ್ತಿದವು. ಇದೇನು ಸ್ವಪ್ನವಲ್ಲವಷ್ಟೇ? ನಾನು ಜೀವಂತವಿರುವದು ನಿಜವೋ? ಎಂದು ಆಕೆಗೆ ಭ್ರಾಂತಿಯುಂಟಾಯಿತು. ಸುಶೀಲೆಯ ಹತ್ತರ ಒಬ್ಬ ವೃದ್ಧ ಸ್ತ್ರೀಯಳು ಕುಳಿತು, ಬೀಸಣಿಕೆಯಿಂದ ಹೌರಗೆ ಗಾಳಿಯನ್ನು ಬೀಸುತ್ತಿದ್ದಳು. ಸುಶೀಲೆಯು ಎಚ್ಚರಿಕೆಯ ಮೇಲೆ ಬಂದಾಗ್ಯೂ ಹಲವು ಹೊತ್ತು ವಿಚಾರಮಾಡುತ್ತಲೇ ಬಿದ್ದುಕೊಂಡಿದ್ದಳು. ತಾನು ನೋಡುವದೆಲ್ಲ ನಿಜವೋ? ಸ್ವಪ್ನವೋ? ಭೂತಚೇಷ್ಟೆಯೋ? ಎಂಬದಾಗಿ ಆಕಗೆ ದಿಂಗುಬಡೆದು ಹೋಯಿತು. ಏನು ಮಾಡಿದಾಗ್ಯೂ ಆಕೆಯ ಭ್ರಾಂತಿಯು ನಿರಸನವು ಆಗಲೊಲ್ಲದು. ಕಡೆಗೆ ಆಕೆಯು ಹಾಗೂ ಹೀಗೂ ಧೈರ್ಯಮಾಡಿ ಆ ಸ್ತಬ್ಧತೆಯನ್ನು ಭಂಗಪಡಿಸಿ "ನಾನೆಲ್ಲಿರುವೆನು?" ಎಂದು ಆ ವೃದ್ಧ ಸ್ತ್ರೀಯಳಿಗೆ ಕೇಳಿದಳು.

"ತಾವು ನಿರ್ಭಯವಾದ ಸ್ಥಳದಲ್ಲಿರುತ್ತೀರಿ. ರಾಣಿಯವರೇ, ಮಾತಾಡುವ ಶ್ರಮವನ್ನು ತೆಗೆದುಕೊಳ್ಳಬೇಡಿರಿ."

"ನೀನು ಯಾರು?"

"ದಾಸಿಯು."

"ಯಾರ ದಾಸಿಯು?"

"ಹೆಸರು ಹೇಳುವ ಅಪ್ಪಣೆಯಿಲ್ಲ."

"ನಾನು ಜೀವವನ್ನು ಕಳೆದುಕೊಳ್ಳಲಿಕ್ಕೆ ಉದ್ಯುಕ್ತಳಾದಾಗ್ಗೆ ನನ್ನನ್ನು ಉಳಿಸಿದವರು ಯಾರು?"

"ತಾವು ಸದ್ಯಕ್ಕೆ ಯಾವ ಮಹಾಪುರುಷನ ಆಶ್ರಯದಲ್ಲಿರುವಿರೋ ಅವನೇ ನಿಮಗೆ ಜೀವದಾನ ಮಾಡಿದನು."

"ಆ ಸತ್ಪುರುಷನನ್ನು ನೋಡಬೇಕೆಂದು ಮನಸ್ಸು ಹಂಬಲಿಸುತ್ತಿರುವದು. ಅವನ ಬೆಟ್ಟಿಯಾಗಲಿಕ್ಕಿಲ್ಲವೋ?"

"ತಾವು ಚನ್ನಾಗಿ ಎಚ್ಚರಿಕೆಯು ಮೇಲೆ ಬಂದ ನಂತರ ಆ ಮಹಾ ಪುರುಷನು ನಿಮಗೆ ಬೆಟ್ಟಿಯಾಗುವನು."

"ನಾನು ಚನ್ನಾಗಿ ಎಚ್ಚರಿಕೆಯು ಮೇಲೆ ಬಂದಿದ್ದು ಸ್ವಸ್ಥಳಾಗಿರುತ್ತೇನೆ. ಬೇಗನೆ ಹೋಗಿ ಅವನನ್ನು ಕರೆದುಕೊಂಡು ಬಾ."

"ತಮಗೆ ಈ ಹೊತ್ತು ಯಾರನ್ನೂ ಬೆಟ್ಟಿಮಾಡಗೊಡಬಾರದೆಂದು ಹಕೀಮನು ಅಪ್ಪಣೆಯನ್ನು ಮಾಡಿರುತ್ತಾನೆ. ಯೋಗ್ಯವೇಳೆಗೆ ಬೆಟ್ಟಿಯಾದೀತು?"

ಆ ಕೃಷ್ಣತಾರಕಾಮಯ ನೇತ್ರಯುಗ್ಮಗಳು ಪುನಃ ಮುಚ್ಚಿದವು. ದಾರಿಯನ್ನು ನಡೆದು ಅತಿಶಯವಾಗಿ ದಣಿದದ್ದರಿಂದ ಸುಶೀಲೆಗೆ ಜಂಪು ಹತ್ತಿತು. ಆ ಜಂಪಿನಲ್ಲಿ ಆಕೆಯು ಸ್ವಪ್ನಸೃಷ್ಟಿಯಲ್ಲಿ ಸಂಚರಿಸಿದಳು. ವಾರಣಾಸೀ ನದಿಯು ತೀರದಲ್ಲಿದ್ದ ತನ್ನ ಪಿತನ ಪವಿತ್ರ ಆಶ್ರಮದೊಳಗೆ ಅವಳು ಹೋಗಿದ್ದು ಅಲ್ಲಿ ವರ್ಣಿಸಲು ಅಸಾಧ್ಯವಾದ ವಾತ್ಸಲ್ಯ–ಸ್ನೇಹ–ಮಮತೆ–ಪ್ರೀತಿಗಳನ್ನು ಅನುಭವಿಸಲಿಕ್ಕೆ ಹತ್ತಿರುವಳು! ಸುಶೀಲೆಯು ಬಾಲ್ಯ ಸಖನಾದ ಮಹೇಶನು ಪಿತನ ಸಮೀಪದಲ್ಲಿ ಕುಳಿತು ವೇದಾಧ್ಯಯನವನ್ನು ಮಾಡುತ್ತಿರುವನು! ಸುಶೀಲೆಯು ತೋಟದಲ್ಲಿ ಹೂಗಳನ್ನು ತರಲಿಕ್ಕೆ ಹೋಗಿರುವಳು! ಸುಶೀಲೆಯು ಪ್ರಿಯಕರನಾದ ಹರಣ ಬಾಲಕನು ಸುಶೀಲೆಯು ಹಿಂದಿಂದೆ ಆನಂದದಿಂದ ನಲಿದಾಡುತ್ತ ಬರುತ್ತಿರುವನು! ಆ ಜಾಜಿ ಮಲ್ಲಿಗೆ–ಸೂಜಿಮಲ್ಲಿಗೆಯು ಲತೆಗಳು ತಮ್ಮ ಕಡೆಗೆ ಬೇಗನೆ ಬರಲಿಕ್ಕೆ ಸುಶೀಲೆಯನ್ನು ಕರೆಯುತ್ತವೋ ಏನೋ ಎಂಬುವಂತೆ ಅಲೆದಾಡುತ್ತಿರುವವು! ತುಲಸೀವೃಂದಾವನದೊಡನೆ ಮಾರುತನು ಕ್ರೀಡಿಸುತ್ತಿರುವನು! ಆಗ ಯಾರೋ ಒಬ್ಬರು ಅವಳ ಕಿವಿಯಲ್ಲಿ "ಸುಶೀಲೇ! ಯಾಕೆ ನೀನು ಇಂಥ ಸುಂದರ, ರಮಣೀಯ, ಪವಿತ್ರ ಮತ್ತು ಪ್ರಶಾಂತ ಆಶ್ರಮವನ್ನು ತ್ಯಾಗ ಮಾಡಿದಿ? ಮತ್ತು ಯಾಕೆ ನೀನು ಅಂಬರರಾಜನ ರಾಣಿಯಾದಿ?" ಎಂದು ನುಡಿದರು.

ಅಂಬರೇಶ್ವರನ ನೆನಪಾದ ಕೂಡಲೆ ಹೃದಯರಂಗದ ಮೇಲೆ ತೆರೆಯು ಬಿದ್ದು ನೂತನ ಪ್ರವೇಶವು ಆರಂಭವಾಯಿತು. ಸುಶೀಲೆಗೆ ತಾನು ಅಂಬ

ರದ ಸುಂದರ ಅರಮನೆಯಲ್ಲಿ ಸುವರ್ಣಖಚಿತವಾದ ಸಿಂಹಾಸನದ ಮೇಲೆ ಕುಳಿತಂತೆಯೂ ತನ್ನ ಸುತ್ತಲು ಅಸಂಖ್ಯ ದಾಸಿಯರು ನೆರದಂತೆಯೂ ಕೆಲವು ದಾಸಿಯರು ತನಗೆ ಬೀಸಣಿಕೆಯಿಂದ ಗಾಳಿಯನ್ನು ಬೀಸುತ್ತಿರುವಂತೆಯೂ ಮತ್ತೆ ಕೆಲವರು ತನ್ನ ಕಾಲನ್ನು ಒತ್ತುತ್ತಿರುವಂತೆಯೂ ಭಾಸವಾಯಿತು. ಅಹಹ! ಆ ರಾಜಮಂದಿರದ ಶೋಭೆಯನು ಎಷ್ಟೆಂತ ವರ್ಣಿಸಬೇಕು! ಸುಗಂಧದ ಎಣ್ಣೆಯ ದೀಪದಿಂದ ಎಲ್ಲಿ ನೋಡಿದಲ್ಲಿ ಲಕಲಕನೆ ಮಿಣುಗುವ ಪ್ರಕಾಶವೂ ಸುಗಂಧಪರಿಮಳದಿಂದ ಗಮಗಮಿಸುವ ಸುವಾಸನೆಯೂ ಅವಳ ಹೃದಯವನ್ನು ತಲ್ಲಣಗೊಳಿಸಿದವು. ಆಕಾಶದಲ್ಲಿ ಪೂರ್ಣಚಂದ್ರಪ್ರಕಾಶವು, ಅಂತರಿಕ್ಷದ ಕೆಳಗೆ ನೀಲವರ್ಣದ ಮೇಘಮಾಲೆಯು, ಮೇಘಮಾಲೆಯ ಕೆಳಗೆ ಪುನಃ ಅಂತರಿಕ್ಷವು, ಆ ಅಂತರಿಕ್ಷದ ಕೆಳಗೆ ಅಂಬರರಾಜ್ಯದ ಭದ್ರವಾದ ದುರ್ಗವು, ಆ ದುರ್ಗದಲ್ಲಿ ರಾಜಮಂದಿರವು, ಆ ರಾಜಮಂದಿರದಲ್ಲಿ ತನ್ನ ಚರಣದ ಹತ್ತರ ಕುಳಿತಿರುವ ಅಂಬರೇಶ್ವರನಾದ ಮಾನಸಿಂಹನು! ಈ ಪ್ರಕಾರ ಅವಳ ಕಣ್ಣೆದುರಿಗೆ ಕಟ್ಟದಂತಾಗಿ ತನ್ನ ದಾಸಿಯರು ತನ್ನನ್ನೂ ಮಾನಸಿಂಹನನ್ನೂ ಏಕಾಂತದಲ್ಲಿ ಬಿಟ್ಟುಕೊಟ್ಟು ಅಂತರ್ಧಾನ ಹೊಂದಲು ಮಾನಸಿಂಹನು ಅವಳ ಸುಕುಮಾರ ಚರಣಕಮಲವನ್ನು ಕೈವಿಡಿದು “ರಾಣಿಯೇ ನನ್ನ ಘೋರವಾದ ಅಪರಾಧವನ್ನು ಕ್ಷಮಿಸು!” ಎಂದು ಹೇಳಿಕೊಂಡಂತೆ ಅನಿಸಿತು. ಹಾಗೂ ತಾನು ಗಾಬರಿಯಾಗಿ, ವ್ಯ ಮುದಡಿಕೊಂಡು “ಮಹಾರಾಜರೇ—ಮಹಾರಾಜರೇ—ಇದೇನು ನಡಿಸಿರುತ್ತೀರಿ? ನಾನು ತಮ್ಮ ಚರಣದಾಸಿಯು. ತಾವು ನನ್ನ ಪತಿಗಳು, ನನ್ನ ದೇವರು, ನನ್ನ ಗುರುಗಳು, ತಾವೇ ನನ್ನ ಸರ್ವಸ್ವವು. ತಮ್ಮ ಹೊರತು ನನಗೆ ಯಾರದೂ ಆಧಾರವಿಲ್ಲ. ಪ್ರಾಣನಾಥರೇ! ನನ್ನನ್ನು ತ್ಯಾಗಮಾಡಬೇಡಿರಿ. ಈ ದಾಸಿಯ ಮೇಲೆ ಅವಿಶ್ವಾಸನನ್ನು ಮಾಡದೆ ಪ್ರೇಮಮಾಡಿರಿ! ರೋಷವನ್ನು ಮಾಡದೆ ಕೃಪಾದೃಷ್ಟಿಯಿಂದ ನೋಡಿರಿ! ಈ ದಾಸಿಯನ್ನು ಕಠೋರ ಭಾಷಣದಿಂದ ದುಃಖಪಡಿಸದೆ ದಾಸಿಯಗೂಡ ಮಧುರಭಾಷಣವನ್ನು ಮಾಡಿರಿ. ನಾಥರೇ! ನಾನು ರಾಣಿಯಾಗುವದಕ್ಕಾಗಿ ಈ ಜನ್ಮವನ್ನು ತೆಗೆದುಕೊಂಡಿಲ್ಲ. ದಾಸಿಯಾಗಿ ತಮ್ಮ ಚರಣಸೇವೆಯನ್ನು ಮಾಡು

ವದಕ್ಕಾಗಿ ವಿಧಾತೃವು ನನ್ನನ್ನು ಕಳಿಸಿರುವನು. ನನ್ನನ್ನು ತಿರಸ್ಕರಿಸಬೇಡಿರಿ" ಎಂದು ಉತ್ತರ ಕೊಟ್ಟಂತೆ ಭಾಸವಾಯಿತು.

ಸ್ವಲ್ಪ ಹೊತ್ತಿನ ಮೇಲೆ ಈ ಎರಡನೆ ಪ್ರವೇಶವು ಸಹ ಮುಗಿಯಿತು. ಹೊಸ ತೆರೆಯು ತೆರೆದು ಹೊಸ ಪ್ರವೇಶವು ಆರಂಭವಾಯಿತು. ಆದರೆ ಅದು ಮಾತ್ರ ಸುಶೀಲೆಗೆ ಬಹಳ ಭಯಂಕರವೆನಿಸಿತು. ಅದೇನಂದರೆ— ಮಹಾರಾಜನಾದ ಮಾನಸಿಂಹನು ಸಿಂಹಾಸನದ ಮೇಲೆ ವಿರಾಜಮಾನನಾಗಿರಲು, ಮಹಾರಾಜನ ಮುಂದೆ ಮಹೇಶನು ಕೈಜೋಡಿಸಿ ನಿಂತುಕೊಂಡು ಮಹಾರಾಜನ ಬದಿಯಲ್ಲಿ ಸಿಂಹಾಸನದ ಮೇಲೆ ಕುಳಿತುಕೊಳ್ಳಲಿಕ್ಕೆ ಸುಶೀಲೆಗೆ ಸ್ಥಳವನ್ನು ಕೊಡುವದಕ್ಕಾಗಿ ಪರಿಪರಿಯಿಂದ ಮಾನಸಿಂಹನಿಗೆ ಹೇಳಲಿಕ್ಕೆ ಹತ್ತಿರುವನು. ಆದರೆ ಅದರ ಉಪಯೋಗವೇನೂ ಆಗಲೊಲ್ಲದು. ಮಹಾರಾಜನು ಕೃದ್ಧನಾಗಿ ಮಹೇಶನಿಗೆ ಅಪಮಾನ ಮಾಡಿ ಮಹೇಶನನ್ನು ಅಟ್ಟಿಕೊಟ್ಟನು. ಮಹೇಶನು ನಿರುಪಾಯದಿಂದ ಕಣ್ಣೊಳಗೆ ನೀರು ತಂದು ಹೊರಗೆ ಅಲ್ಲಿಂದ ಹೊರಟು ಹೋದನು. ತನ್ನ ಬಾಲ್ಯಮಿತ್ರನು ತನ್ನನ್ನು ಈ ಸ್ಥಿತಿಯಲ್ಲಿ ಬಿಟ್ಟುಕೊಟ್ಟು ಹೋದ್ದರಿಂದ ಸುಶೀಲೆಯ ನಿರಾಶೆಯು ಹೆಚ್ಚಾಯಿತು. ಆ ಮೇಲೆ ಮಹಾರಾಣಿ ಕಮಲಕುಮಾರಿಯು ಸಿಟ್ಟಿನಿಂದ ಹಲ್ಲು ತುಟಗಳನ್ನು ಕಡಿಯುತ್ತ ಬಂದು ಅವಳಿಗೆ ನಾನಾ ಪ್ರಕಾರದ ಅಭದ್ರ-ಕರ್ಣಕಟು-ಅಪಮಾನಾಸ್ಪದ ಶಬ್ದಗಳನ್ನು ನುಡಿದು ಅವಳ ಹೃದಯದಲ್ಲಿ ಬೆಂಕಿಯನ್ನು ಸುರುವಿ "ಈಗಿಂದೀಗಲೇ ಇಲ್ಲಿಂದ ಹೊರಟುಹೋಗು!" ಎಂದು ಹೇಳಿ ಸುಶೀಲೆಯನ್ನು ಬಲತ್ಕಾರದಿಂದ ಹೊರಗೆ ನೂಕಿಸಿಕೊಟ್ಟಳು! ಇದರಿಂದ ಸುಶೀಲೆಯ ತಲೆಯು ಎದುರಿಗಿದ್ದ ಗೋಡೆಗೆ ಧುಪ್ಪನೆ ಬಡೆದದ್ದರಿಂದ ಅವಳಿಗೆ ಅತ್ಯಂತ ವೇದನೆಯಾಯಿತು. ಇದನ್ನೆಲ್ಲ ಮಹಾರಾಜನು ನೋಡುತ್ತ ಸುಮ್ಮನೆ ಕುಳಿತಿದ್ದನು. ಬಾಯಿಂದ ಒಂದೂ ಶಬ್ದವನ್ನು ಮಾತಾಡಲಿಲ್ಲ. ಆಗ ಮಾತ್ರ ಸುಶೀಲೆಯು ಅದನ್ನು ಸಹಿಸಲಾರದೆ ದುಃಖದಿಂದ ಚೀರಿ "ಮಹೇಶನೇ! ಹೋಗಬೇಡ. ನನ್ನನ್ನು ಕರೆದುಕೊಂಡು ಹೋಗು. ನನ್ನನ್ನು ನನ್ನ ಪಿತನ ಆಶ್ರಮಕ್ಕೆ ಒಯ್ದು ಮುಟ್ಟಿಸು." ಎಂದು ಗಟ್ಟಿಯಾದ ಧ್ವನಿಯಿಂದ ಹೇಳಿದಳು.

ಈ ಪ್ರಕಾರ ಸುಶೀಲೆಯು ಕೇವಲ ಸ್ವಪ್ನದಂತೆ ಬೇರೆಬೇರೆ ವಿಚಾರಗಳಲ್ಲಿ ತಲ್ಲೀನಳಾಗಿ ದುಃಖದಿಂದ ಒದರಿದ ಕೂಡಲೆ ಈ ಅವಳ ಕಡೆಯ ಸ್ವಪ್ನವನ್ನು ನಿಜವಾಗಿ ಮಾಡುವದಕ್ಕೋ ಏನೋ ಮಹೇಶನು ಕಣ್ಣೀರು ಸುರಿಸುತ್ತ ಅವಳ ಮುಂದೆ ಬಂದು ನಿಂತು "ಸುಶೀಲೇ, ಹೆದರಬೇಡ. ಇಕೋ! ನಾನು ಬಂದೆನು. ನಿನ್ನನ್ನು ನಾನು ಪಿತನ ಆಶ್ರಮಕ್ಕೆ ಒಯ್ದು ಮುಟ್ಟಿಸುತ್ತೇನೆ" ಎಂದು ನುಡಿದನು.

ಸುಶೀಲೆಯು ತನ್ನ ಕಣ್ಣು ತೆರೆದು ನೋಡಿ ಗಾಬರಿಯಾದಳು. ಅವಳಿಗೆ ಏನೂ ಸೂಚಿಸಲೊಲ್ಲದು. ಅವಳು ಪುನಃ ಕಣ್ಣು ಗಟ್ಟಿಯಾಗಿ ಮುಚ್ಚಿಕೊಂಡು ಹಲವು ಹೊತ್ತು ಸ್ವಸ್ಥವಾಗಿ ಕುಳಿತುಕೊಂಡು ಮನಸ್ಸು ಕಿಂಚಿತ್ತು ಸ್ಥಿರವಾದ ಬಳಿಕ ಮತ್ತು ಸ್ವಲ್ಪ ಎಚ್ಚರಿಕೆಯು ಬಂದಬಳಿಕ ಪುನಃ ತನ್ನ ಕಣ್ಣನ್ನು ಹೊರಗೆ ತೆರೆದು ನೋಡಿದಳು. ಆಗ ಅವಳು ತನ್ನ ಮುಂದೆ ಒಬ್ಬ ಸುಂದರನಾದ ಮುಸಲ್ಮಾನ ಶೂರಪುರುಷನು ನಿಂತುಕೊಂಡದ್ದನ್ನು ಕಂಡು, ತನ್ನ ಮನಸ್ಸಿನಲ್ಲಿ "ಈ ಮುಸಲ್ಮಾನನು ಯಾರು? ಇವನು ಇಲ್ಲಿ ಹೇಗೆ ಬಂದನು?" ಎಂದು ವಿಚಾರ ಮಾಡತೊಡಗಿದಳು.

ಆ ತರುಣ ವೀರನು "ಸುಶೀಲೇ, ಅಂಜಬೇಡ. ಇಕೋ, ನಾನು ಬಂದಿರುವೆನು" ಎಂದು ಅಂದನು.

ಸುಶೀಲೆಯು ಗಾಬರಿಯಾದಳು. ಅವಳು ಅಂಜುತ್ತ "ನೀವು ಯಾರು?" ಎಂದು ಅವನಿಗೆ ಕೇಳಿದಳು.

ಆ ಮುಸಲ್ಮಾನ ತರುಣ ವೀರನು ಸದ್ಗದಿತ ಸ್ವರದಿಂದ "ಸುಶೀಲೇ, ನನ್ನ ಗುರುತು ನಿನಗೆ ಹತ್ತಲಿಲ್ಲೇನು? ನಾನು ಮಹೇಶನು" ಎಂದು ಉತ್ತರ ಕೊಟ್ಟನು.

"ಅಂದಬಳಿಕ ನಿಮಗೆ ಈ ವೀರ ವೇಷವು ಯಾತಕ್ಕೆ? ನಿಮ್ಮ ಭಗವೀ ವಸ್ತ್ರವೂ ರುದ್ರಾಕ್ಷಮಾಲೆಯೂ ಕಮಂಡಲವೂ ಎಲ್ಲಿ?"

"ಆ ವೇಷವನ್ನು ನಾನು ನಿರಂತರವಾಗಿ ತ್ಯಾಗಮಾಡಿರುವೆನು! ಆ ನಿನ್ನ ಬ್ರಾಹ್ಮಣ ಕುಮಾರನಾದ ಮಹೇಶನು ಮೃತ್ಯುವನ್ನು ಹೊಂದಿದ

ನೆಂತಲೂ ಈಗ ನಿನ್ನ ಮುಂದೆ ಸದ್ಯಕ್ಕೆ ಅಕಬರನ ಸೇನಾಪತಿಯಾಗಿರುವ ಫೈಜಿಯು ನಿಂತುಕೊಂಡಿರುತ್ತಾನೆಂತಲೂ ತಿಳಿದುಕೋ."

"ನೀವು ನನಗೆ ಪುನಃ ಯಾಕೆ ಬೆಟ್ಟಿಯಾದಿರಿ? ಪುನಃ ಸುಶೀಲೆಯೇ ಎಂದು ಯಾಕೆ ನನ್ನನ್ನು ಕೂಗಿದಿರಿ? ನನ್ನನ್ನು ಇಲ್ಲಿ ಯಾಕೆ ತಂದಿರಿ? ನಾನು ಅಂಬರಾಧಪತಿಯಾದ ಮಾನಸಿಂಹನ ಪತ್ನಿ ಎಂಬುವದು ನಿಮಗೆ ಗೊತ್ತಿಲ್ಲವೇನು?"

"ಸುಶೀಲೇ, ಇದೆಲ್ಲ ನನಗೆ ಗೊತ್ತುಂಟು. ನೀನು ಸರೋವರದಲ್ಲಿ ಜೀವಕೊಡಲಿಕ್ಕೆ ಹೋಗಿದ್ದಿ. ಆಗ ದೈವಯೋಗದಿಂದ ನಾನು ನಿನ್ನನ್ನು ಬದುಕಿಸಿದೆನು."

"ಮಹೇಶ! ನೀವು ನಿಶ್ಚಯವಾಗಿ ಕೆಟ್ಟದು ಮಾಡಿದಿರಿ! ಹತ ಭಾಗ್ಯಳಾದ ನನಗೆ ಯಾರದೂ ಆಶ್ರಯವಿಲ್ಲ! ಈ ಜಗತ್ತಿನಲ್ಲಿ ನನ್ನವರು ಯಾರೂ ಇಲ್ಲ! ಸ್ವಲ್ಪ ಹೊತ್ತು ಎಲ್ಲಿಯಾದರೂ ಸ್ವಸ್ಥವಾಗಿ ಬಿದ್ದುಕೊಂಡೇ ನಂದರೆ ದೇವರು ನನಗೆ ಅಂಥ ಸ್ಥಳವನ್ನು ಸಹ ಇಟ್ಟಿಲ್ಲ. ನಾನು ರಾಣಿ ಯಾದಾಗ್ಯೂ ಬೀದಿಯಲ್ಲಿ ಅಡ್ಡಾಡುವ ಭಿಕ್ಷುಕಳಿಗಿಂತ ನನ್ನ ಸ್ಥಿತಿಯು ಕೆಟ್ಟದಾಗಿರುವದು! ನಾನು ನನ್ನ ಜೀವಕ್ಕೆ ಬೇಸರಗೊಂಡು ಈ ಸಂಸಾರ ಯಾತನೆಯೊಳಗಿಂದ ಮುಕ್ತಳಾಗಲಿಕ್ಕೆ ಪ್ರಯತ್ನಮಾಡಲಾಗಿ ನೀವು ನನಗೆ ಯಾಕೆ ಪ್ರತಿಬಂಧಮಾಡಿದಿರಿ? ಈ ಪ್ರಕಾರ ವೈರತ್ವವನ್ನು ಸಾಧಿಸಿದ್ದರಿಂದ ನಿಮಗೆ ಏನು ಪ್ರತಿಫಲವು ದೊರಕಿತು?"

ಮುಂದೆ ಸುಶೀಲೆಯ ಬಾಯಿಂದ ಶಬ್ದಗಳು ಹೊರಬೀಳದಾದವು. ಅವಳು ಒಂದೇಸವನೆ ಬಿಕ್ಕಲಿಕ್ಕೆ ಹತ್ತಿದಳು. ಅವಳು ಅಳುತ್ತಳುತ್ತ ತನ್ನ ಯಾವತ್ತು ವೃತ್ತಾಂತವನ್ನು ಮಹೇಶನಿಗೆ ತಿಳಿಸಿದಳು.

ಈ ಎಲ್ಲ ವೃತ್ತಾಂತವನ್ನು ಫೈಜಿಯು ಕೇಳಿ ಮಾನಸಿಂಹನ ಮೇಲೆ ಸಿಟ್ಟಿಗೆದ್ದು ದಂತೌಷ್ಠಗಳನ್ನು ಕಡಿದನು. ನಿರಪರಾಧಿಯಾದ ಸುಶೀ ಲೆಯು ಭೋಗಿಸುವ ವಿಪತ್ತಿಗೆ ತಾನೇ ಕಾರಣನೆಂಬುವದೂ ತನ್ನಗೋಸ್ಕರ ಈ ನಿಷ್ಕಲಂಕ ಸಾಧ್ವಿಗೆ ಈ ಪ್ರಕಾರ ವಿಟಂಬನವಾಯಿತೆಂಬುವದೂ ಗೊತ್ತಾದ ಕೂಡಲೆ ಫೈಜಿಯ ಕೋಮಲ ಹೃದಯಕ್ಕೆ ಕಾಸಿದ ಕಬ್ಬಿಣದಿಂದ

ಬರೆಯುನ್ನು ಕೊಟ್ಟಂತಾಯಿತು. ಮಾನಸಿಂಹನ ಅತ್ಯಾಚಾರಕ್ಕಾಗಿ ಅವನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ಫೈಜಿಯು ನಿಶ್ಚಯಿಸಿದನು. ಆದರೂ ಅವನು ತನ್ನ ಕೃದ್ಧವಾದ ಮನೋವೃತ್ತಿಯನ್ನು ಹೊರಗೆ ತೋರಿಸದೆ ಗಂಭೀರ ವಾಣಿಯಿಂದ “ ಸುಶೀಲೇ, ಆಗುವದೆಲ್ಲ ಆಗಿಹೋಯಿತು. ಅದನ್ನು ತಿರುಗಿಸಲಿಕ್ಕೆ ಈಗ ದಾರಿಯು ಉಳಿಯಲಿಲ್ಲ. ಈ ಎಲ್ಲ ಅನರ್ಥಕ್ಕೆ ದುಷ್ಟನಾದ ನಾನೇ ಕಾರಣನಾದೆನು. ಈ ಪಾಪಕ್ಕಾಗಿ ನಾನು ಯೋಗ್ಯ ಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳುವೆನು. ನನ್ನ ಕೈಯಲ್ಲಿ ಎರಡನೇದ್ದು ಏನುಂಟು? ನಾನು ಆಗಾಗ್ಗೆ ರಾತ್ರಿಯಲ್ಲಿ ಗುಪ್ತವೇಷದಿಂದ ಛಾವಣಿಯಲ್ಲಿ ವ್ಯವಸ್ಥೆಯು ಹೇಗಿರುತ್ತದೆ, ಕಾವಲುಗಾರರಾದ ಸಿಪಾಯರು ಎಚ್ಚರಿಕೆಯಿಂದ ಇರುವರೋ ಇಲ್ಲೋ ಎಂಬುವದನ್ನು ಪ್ರತ್ಯಕ್ಷವಾಗಿ ನೋಡುವದಕ್ಕೆ ಅಡ್ಡಾಡಬೇಕಾಗುತ್ತದೆ. ನಿನ್ನೆ ರಾತ್ರಿ ಇದರಂತೆಯೇ ನಾನು ಅಡ್ಡಾಡುತ್ತ ಬಹಳ ದೂರ ಹೋಗಿದ್ದೆನು ನನಗೆ ಕತ್ತಲದಲ್ಲಿ ನಿನ್ನ ಗುರುತು ಹತ್ತಲಿಲ್ಲ. ಆಗ ಯಾರೋ ಆತ್ಮಘಾತ ಮಾಡಿಕೊಳ್ಳುವದಕ್ಕಾಗಿ ಸರೋವರದಲ್ಲಿ ಧುಪ್ಪನೆ ಬಿದ್ದ ಸಪ್ಪಳವನ್ನು ಕೇಳಿ ನಾನೂ ನೀರೊಳಗೆ ಹಾರಿಕೊಂಡು ನಿನ್ನನ್ನು ಮೇಲಕ್ಕ ತೆಗೆದೆನು. ಅದಿರಲಿ, ನೀನು ಕೆಲವು ದಿವಸ ಇಲ್ಲಿ ಇರು. ನಾನು ಯುವರಾಜನಾದ ಸೇಲಿಮನ ಮಾರ್ಗಪ್ರತೀಕ್ಷವನ್ನು ಮಾಡುತ್ತಿದ್ದೇನೆ. ಯುವರಾಜನು ಇಷ್ಟರಲ್ಲಿ ಇತ್ತ ಕಡೆಗೆ ಬರಬಹುದು. ನಾನು ತೀರ್ಥರೂಪರಿಗೆ ನಿರೂಪವನ್ನು ಕಳಿಸುವೆನು. ಅವರು ಇಲ್ಲಿಗೆ ಬಂದು ನಿನ್ನನ್ನು ಕರೆದುಕೊಂಡು ಹೋಗುವರು.”

ಆ ನಂತರ ಸುಶೀಲೆಯು ಏನೂ ಮಾತಾಡಲಿಲ್ಲ. ಅವಳು ಪುನಃ ಕಣ್ಣು ಮುಚ್ಚಿದಳು ಫೈಜಿಯು ಅಲ್ಲಿಂದ ಹೊರಟುಹೋದನು. ಅವನು ಸುಶೀಲೆಯ ಶುಶ್ರೂಷೆಯನ್ನು ಮಾಡುವದಕ್ಕಾಗಿ ಹಿಂದೂ ದಾಸಿಯರನ್ನು ಇಟ್ಟಿದ್ದನು.

ಮೆಲ್ಲಮೆಲ್ಲನೆ ಹಗಲು ಮುಗಿದು ರಾತ್ರಿಯಾಯಿತು. ನಾಲ್ಕೂ ಕಡೆಗೆ ನಿಃಶಬ್ದವಾಗಿರುವದನ್ನು ನೋಡಿ ಎರಡು ಪ್ರಹರ ರಾತ್ರಿಯ ಸಮಯಕ್ಕೆ ಸುಶೀಲೆಯು ತನ್ನ ಶಯ್ಯದ ಮೇಲಿಂದ ಎದ್ದು ತನ್ನನ್ನು ಯಾರೂ

ನೋಡುವದಿಲ್ಲವೆಂದು ಸಂಪೂರ್ಣವಾಗಿ ಮನವರಿಕೆಯನ್ನು ಮಾಡಿಕೊಂಡು ಹೌರಗೆ ಕತ್ತಲೊಳಗೆ ಡೇರೆಯ ಹಿಂಬದಿಯಿಂದ ಹೊರಬಿದ್ದು ಹೊರಟು ಹೋದಳು. ಸುದೈವದಿಂದ ಕಾವಲುಗಾರರಿಗೆ ನಿದ್ರೆಹತ್ತಿತ್ತು. ಈ ಕಗ್ಗತ್ತಲಲ್ಲಿ ಅವಳನ್ನು ಯಾರೂ ನೋಡಲಿಲ್ಲ. ಮತ್ತ ಯಾರೂ ಅವಳಿಗೆ ಅಡ್ಡಿಯನ್ನು ಮಾಡಲಿಲ್ಲ ಮಾರಣೇದಿವಸ ಬೆಳಿಗ್ಗೆ ಅವಳು ಹೊರಟುಹೋದ ವರ್ತಮಾನವನ್ನು ಫೈಜಿಯು ಕೇಳಿ ಆಶ್ಚರ್ಯಚಕಿತನಾದನು. ಆ ಕೂಡಲೆ ಅವನು ಈ ಯಾವತ್ತು ವೃತ್ತಾಂತವನ್ನು ಅವಳ ಪಿತನಾದ ಸನ್ಯಾಸಿಗೆ ಹೇಳಿ ಕಳಿಸಿದನು. ತನ್ನ ಪ್ರಿಯ ಕನ್ಯೆಯಾದ ಸುಶೀಲೆಯ ಮೇಲೆ ಈ ದುರ್ಧರ ಪ್ರಸಂಗವು ಬಂದೊದಗಿದ್ದನ್ನು ಕೇಳಿದ ಕೂಡಲೆ ಆ ಸನ್ಯಾಸಿಯ ಮನಸ್ಸಿನ ಸ್ಥಿತಿಯು ಏನಾಗಿ ಹೋಯಿತೆಂಬುವದನ್ನು ಕೇವಲ ಕಲ್ಪನೆಯಿಂದಲೇ ತಿಳಿದುಕೊಳ್ಳತಕ್ಕದ್ದು! ಆ ಸನ್ಯಾಸಿಗೆ ಈ ವರ್ತಮಾನವು ತಿಳಿದಕ್ಷಣವೇ ಅವನು ಅವಳ ಶೋಧಾರ್ಥವಾಗಿ ಎಷ್ಟೋ ದಿವಸಗಳ ವರೆಗೆ ಅಡವಿಗಳಲ್ಲಿಯೂ, ಗುಡ್ಡಗಳಲ್ಲಿಯೂ, ರಾತ್ರಿ ಹಗಲು–ಬಿಸಿಲು ನೆರಳು–ದಣವು–ವಿಶ್ರಾಂತಿ–ಇವುಗಳ ಕಡೆಗೆ ಏನೂ ನೋಡದೆ ಅಡ್ಡಾಡಿದನು. ಹಸಿವೆ ನೀರಡಿಕೆ–ಗಾಳಿ–ಚಳಿಗಳ ನೆನವು ಸಹ ಅವನಿಗೆ ಇದ್ದಿಲ್ಲ. ಈ ಪ್ರಕಾರ ಅವನು ಬಹಳ ಕಷ್ಟವನ್ನು ಸಹಿಸುತ್ತ ಅನೇಕ ಕಡೆಗೆ ಅಡ್ಡಾಡಿದ ತರುವಾಯ ಕಡೆಗೆ ಒಂದು ದಿವಸ ಅವನು ತನ್ನ ಪ್ರಿಯ ಕನ್ಯೆಯು ಹಸಿವೆಯಿಂದ ಕಂಗೆಟ್ಟು, ದಾರಿ ನಡೆದ ಶ್ರಮದಿಂದ ದಣಿದು, ಮೂರ್ಛೆಯಿಂದ ಒಂದು ಗಿಡದ ಕೆಳಗೆ ಬಿದ್ದುಕೊಂಡಿದ್ದನ್ನು ಕಂಡನು. ಆಗ ಆ ಸನ್ಯಾಸಿಯು ತಾನು ಕಳೆದುಕೊಂಡಿದ್ದ ರತ್ನವು ತಿರುಗಿ ದೊರಕಿತೆಂದು ಬಹಳ ಆನಂದಪಟ್ಟು, ಅವಳನ್ನು ಅತ್ಯಂತ ಪ್ರೇಮದಿಂದ ತನ್ನ ಹೃದಯಕ್ಕೆ ಅವಚಿಕೊಂಡು, ಬಹಳೊತ್ತಿನ ವರೆಗೆ ಕಣ್ಣೀರು ಉದುರಿಸಿ, ಅವಳ ದುಃಖವನ್ನು ಶಮನಮಾಡುವದಕ್ಕಾಗಿ ಕೆಲವು ಧೈರ್ಯೋಕ್ತಿಗಳನ್ನು ಹೇಳಿ, ಅವಳನ್ನು ಒಂದು ನಿರ್ಭಯವಾದ ಗುಹೆಯಲ್ಲಿ ಕರೆದುಕೊಂಡು ಹೋದನು.

ಶೇಖ ಫೈಜಿಯು ಷಟ್‌ಶಾಸ್ತ್ರಗಳಲ್ಲಿ ಪಾರಂಗತನಾಗಿದ್ದಂತೆ ಶಸ್ತ್ರವಿದ್ಯೆಯಲ್ಲಿಯೂ ಅತ್ಯಂತ ಪ್ರವೀಣನಿದ್ದನು. ಯುದ್ಧದ ಕಾರಭಾರವನ್ನು

ತಾನಾಗಿ ಬಾದಶಹನಿಗೆ ಹೇಳಿ ತೆಗೆದುಕೊಂಡದ್ದು ನಿಜವೇ. ಆದರೆ ಅವನು ಯುದ್ಧಕ್ಕೆ ಹೋಗುವದನ್ನು ನೋಡಿ ಅಕಬರಬಾದಶಹನು ಆನಂದಪಟ್ಟು ಅವನನ್ನು ಯುವರಾಜನಾದ ಸೇಲಿಮನ ಸೈನದ ಸಂಗಡ ಕಳಿಸಿದ್ದನು. ಆದ್ದರಿಂದ ಅವರಿಬ್ಬರೂ ಸೈನ್ಯದ ಎರಡು ತುಕ್ಕಡಿಗಳನ್ನು ಮಾಡಿಕೊಂಡು ಎರಡು ದಿಕ್ಕುಗಳಿಂದ ಶತ್ರುಗಳ ಮೇಲೆ ಸಾಗಿ ಹೋಗುತ್ತಲಿದ್ದರು ಸೇನಾಪತಿ ಮುಹಮ್ಮದಖಾನನೂ, ಮಹಾರಾಜ ಮಾನಸಿಂಹನೂ ಉಳಿದ ಎರಡು ದಿಕ್ಕುಗಳಿಂದ ಶತ್ರುಗಳ ಮೇಲೆ ಸಾಗಿಹೋಗುತ್ತಲಿದ್ದರು ಈ ವ್ಯವಸ್ಥೆಯಿಂದ ಶತ್ರುಗಳನ್ನು ನಾಲ್ಕೂ ಕಡೆಯಿಂದ ಮುತ್ತಿ ಅವರನ್ನು ಪರಾಭವ ಮಾಡಬೇಕೆಂದು ಬಾದಶಹನು ಆಜ್ಞೆಯನ್ನು ಮಾಡಿದ್ದನು. ಆ ಸಮಯಕ್ಕೆ ಫೈಜಿಯ ಸೈನ್ಯವು ಸದ್ಯಕ್ಕೆ ಬಟಲದ ಹತ್ತಿರವಿದ್ದ ವಿಸ್ತೀರ್ಣವಾದ ಒಂದು ಬೈಲಲ್ಲಿ ಇಳಿದುಕೊಂಡಿತ್ತು. ಸದ್ಯಕ್ಕೆಎಂಟು ದಿವಸಗಳ ಪರಿಯಂತರ ಅಲ್ಲಿಯೇ ಉಳಿದುಕೊಳ್ಳುವದಕ್ಕಾಗಿ ಯುವರಾಜನಾದ ಸೇಲಿಮನ ಕಡೆಯಿಂದ ನಿರೂಪವು ಬಂದಿತ್ತು. ಇದಲ್ಲದೆ ಗುಡ್ಡಗಾಡಿನೊಳಗಿನ ದಾರಿಯನ್ನೂ, ಐಸಕಟ್ಟನ ಸ್ಥಳವನ್ನೂ, ಗೊತ್ತುಮಾಡಿಕೊಳ್ಳುವದು ಫೈಜಿಯ ಮನಸ್ಸಿನಲ್ಲಿತ್ತು. ಫೈಜಿಯು ಸೇಲಿಮನ ನಿರೂಪವನ್ನು ತೆಗೆದುಕೊಂಡು ಬಂದಂಥ ಸುದ್ದಿಗಾರನ ಸಂಗಡ ಮಾತಾಡುತ್ತ ತನ್ನ ಡೇರೆಯಲ್ಲಿ ಕುಳಿತಿದ್ದನು. ಅಷ್ಟರಲ್ಲಿ ಫೈಜಿಯ ಒಬ್ಬ ವಿಶ್ವಾಸಿಕ ಸಿಪಾಯಿಯು ಡೇರೆಯೊಳಗೆ ಬಂದು ಮುಜರಿಯನ್ನು ಮಾಡಿ “ಖಾವಿಂದರೇ, ಹೊರಗೆ ಯಾವನೋ ಒಬ್ಬ ಹಿಂದೂ ಫಕೀರನು ಬಂದಿದ್ದು ಅವನು ನಿಮಗೆ ಕೊಡುವದಕ್ಕಾಗಿ ಈ ಉಂಗುರವನ್ನು ಕೊಟ್ಟಿದ್ದಾನೆ” ಎಂದು ಹೇಳಿ ಅದನ್ನು ಫೈಜಿಯ ಮುಂದೆ ಇಟ್ಟು ಹೊರಟು ಹೋದನು. ಈ ಉಂಗುರವನ್ನು ನೋಡಿದವನೇ ಫೈಜಿಯು ಸೇಲಿಮನ ಸುದ್ದಿಗಾರನನ್ನು ಅಲ್ಲಿಯೇ ಬಿಟ್ಟುಕೊಟ್ಟು ವಿದ್ಯುಲ್ಲತೆಯ ವೇಗದಿಂದ ಹೊರಗೆ ಬಂದನು. ಅವನನ್ನು ನೋಡಿದ ಕೂಡಲೆ ಸನ್ಯಾಸಿಯು ಕಣ್ಣೀರು ಉದುರಿಸುತ್ತ “ಮಗುವೇ! ಸುಕುಮಾರ ಕನ್ಯೆಯು ಆ ಚಾಂಡಾಲನ ಭಯಂಕರ ಅತ್ಯಾಚಾರದ ತೀವ್ರವಾದ ಮರ್ಮವೇದನೆಯಿಂದ ಭ್ರಮಿಷ್ಠಳಾಗಿ ಹೋಗಿರುತ್ತಾಳೆ. ಅವಳ ಜೀವದ ಆಶೆಯು ಇನ್ನು ಉಳಿದಿಲ್ಲ. ಈ

ಭ್ರಮಿಷ್ಟಾವಸ್ಥೆಯಲ್ಲಿಯೇ ಅವಳ ಅಂತ್ಯವಾಗುವದೆಂಬಂತೆ ಕಾಣುತ್ತದೆ ಎಂದು ನುಡಿದನು.

ಈ ಭಯಂಕರವಾದ ಶಬ್ದಗಳು ಫ್ರೈಜಿಯು ಕಿವಿಗೆ ಬಿದ್ದ ಕೂಡಲೆ ಅವನ ಅಂತಃಕರಣದಲ್ಲಿ ಉರಿಯು ಬಿದ್ದಂತಾಯಿತು. ಅವನಿಗೆ ಸಾವಿರಾರು ಚೇಳುಗಳು ಕಡಿದಷ್ಟು ವೇದನೆಯು ಆಗಿ ಪ್ರತಿ ಕ್ಷಣದಲ್ಲಿ ಅದು ಹೆಚ್ಚೆಚ್ಚು ದುಸ್ಸಹವಾಯಿತು. ನಿರಪರಾಧಿಯಾದ ಸುಶೀಲೆಯ ಮೇಲೆ ಅನ್ಯಾಯದಿಂದ ಘೋರಾಪರಾಧವು ಹೊರಿಸಲ್ಪಟ್ಟ ಕಾರಣ ಅವಳಿಗೆ ಈ ಕೆಟ್ಟ ದಶೆಯು ಪ್ರಾಪ್ತವಾಯಿತೆಂಬ ವಿಚಾರದಿಂದ ಫ್ರೈಜಿಗೆ ಅಪರಿಮಿತ ದುಃಖವಾಯಿತು. "ಸನ್ಯಾಸಿಗೆ ನಾನು ಕೊಟ್ಟ ವಚನವನ್ನು ಭಂಗಮಾಡಿ ಸುಶೀಲೆಗೆ ಬೆಟ್ಟೆಯನ್ನು ಕೊಡದಿದ್ದರೆ ಅವಳು ಜಗತ್ತಿನ ದೃಷ್ಟಿಗೆ ಈ ಪ್ರಕಾರ ಕಲಂಕಿತಳೂ ನಿರಾಶ್ರಿತಳೂ ಆಗುತ್ತಿದ್ದಿಲ್ಲ. ದುರ್ದೈವಿಗೆ ಈ ದುರ್ದಶೆಯನ್ನು ಭೋಗಿಸಲಿಕ್ಕೆ ಅಧಮನಾದ ನಾನೇ ಕಾರಣನಾದೆನು" ಎಂದು ಅವನು ಮೇಲಿಂದ ಮೇಲೆ ತನ್ನ ಮನಸ್ಸಿನಲ್ಲಿ ಬಹಳ ದುಃಖಪಟ್ಟನು. ಏನು ಮಾಡಿದರೂ ಅವನ ದುಃಖವು ನಿಲ್ಲದಾಯಿತು ಅವನಿಗೆ ಆತ್ಮಸಂಯಮನ ಮಾಡಿಕೊಳ್ಳುವದು ಅಸಂಭವವಾಯಿತು. ಅವನು ಹಲ್ಲುತುಟಗಳನ್ನು ಕಡಿದು ತನ್ನ ಮನಸ್ಸಿನಲ್ಲಿ ಏನೋ ನಿಶ್ಚಯಮಾಡಿದನು. ಅದೇನೆಂಬುವದು ಅವನಿಗೇ ಗೊತ್ತು! ಆದರೆ ವಾಚಕರೇ, ಆಧೈರ್ಯಪಡಬೇಡಿರಿ. ನಿಮಗೂ ಅದು ಬೇಗನೇ ತಿಳಿದೀತು. ಸನ್ಯಾಸಿಯಂತೂ ಅಲ್ಲಿಂದ ಹೊರಟುಹೋದನು.

## ಭಾಗ ೧೫.

## ಚಮತ್ಕಾರಿಕ ಪತ್ರವು.

ರಜಪುತಸ್ಥಾನದ ಗುಡ್ಡಗಾಡಪ್ರದೇಶದಲ್ಲಿ ಹಳ್ಳಕೊಳ್ಳಗಳೊಳಗೆ ರಜಪುತ ರಾಜರೊಳಗೂ ಮುಸಲ್ಮಾನರೊಳಗೂ ಮೇಲಿಂದ ಮೇಲೆ ಕದನಗಳು ಎಸಗುತ್ತಿದ್ದವು. ಆದರೆ ಈ ಕದನಗಳಲ್ಲಿ ಯಾವ ಪಕ್ಷದವರೂ ಪರಾಭವವನ್ನು ಹೊಂದಿದ್ದಿಲ್ಲ. ಉಭಯ ಸೇನಾಪತಿಗಳು ಪರಸ್ಪರರಿಗೆ

ಹೆದರಿಕೆಯನ್ನು ಹಾಕುತ್ತಲೂ ತಮ್ಮ ತಮ್ಮ ಪಕ್ಷಗಳನ್ನು ಬಲಪಡಿಸುತ್ತಲೂ ಆವೇಶವುಳ್ಳ ಯುದ್ಧವನ್ನು ಮಾಡುವ ಸಂಧಿಯನ್ನು ಹುಡುಕುತ್ತಲೂ ಕುಳಿತುಕೊಂಡಿದ್ದರು ಒಂದು ದಿವಸ ಮಾನಸಿಂಹನು ತನ್ನ ಡೇರೆಯಲ್ಲಿ ಯುದ್ಧದ ಹಲವು ಮರ್ಮಗಳನ್ನು ಕುರಿತು ವಿಚಾರಮಾಡುತ್ತ ಕುಳಿತಿರಲು ಒಬ್ಬ ಸಿಪಾಯಿಯು ಅವನಿಗೆ ಒಂದು ಪತ್ರವನ್ನು ತಂದು ಮುಟ್ಟಿಸಿದನು. ಮಾನಸಿಂಹನು ಆ ಸಿಪಾಯಿಯ ಕಡೆಗೆ ಆಶ್ಚರ್ಯ ದೃಷ್ಟಿಯಿಂದ ನೋಡುತ್ತ ಆ ಪತ್ರವನ್ನು ತೆರೆದನು. ಆ ಪತ್ರವನ್ನು ಓದಿದ ಮೇಲಂತೂ ಅವನ ಆಶ್ಚರ್ಯವು ಹೆಚ್ಚಾಯಿತು. ಕೂಡಲೆ ಅವನ ಕೈಯು ತನ್ನ ಟೊಂಕದಲ್ಲಿ ತೂಗಾಡುತ್ತಿದ್ದ ಕತ್ತಿಯ ಕಡೆಗೆ ಹೋಗಿ ಅವನು ಅದನ್ನು ಒರೆಯೊಳಗಿಂದ ಹಿರಿದನು. ಪತ್ರವನ್ನು ತೆಗೆದುಕೊಂಡು ಬಂದಿದ್ದ ಸಿಪಾಯಿಯು ಗಾಬರಿಯಿಂದ ಹೌಹಾರಿದನು. ಮಾನಸಿಂಹನ ಆ ಕೃದ್ಧಮುದ್ರೆಯು ಬೇಗನೆ ಬದಲಾಗಿ ಅವನು ಕೊಕ್ಕೊಕ್ ಎಂದು ನಗಹತ್ತಿದನು. ಆ ಪತ್ರದಲ್ಲಿ ಬರೆದ ಸಂಗತಿಯು ವಿನಂದರೆ:—

"ಮಹಾರಾಜರೇ, ನೀವಂತೂ ಕ್ಷತ್ರಿಯ ವೀರರು. ಸಾರ್ವಭೌಮ ದಿಲ್ಲೀಪತಿಯ ಮುಖ್ಯಸೇನಾಪತಿಗಳು. ನಿಮ್ಮಂಥ ಧೈರ್ಯಶಾಲಿಗಳಾದ ವೀರಪುರುಷರು ಇಡೀ ಹಿಂದುಸ್ಥಾನದಲ್ಲಿ ಯಾರೂ ಇಲ್ಲವೆಂದು ಎಲ್ಲ ಕಡೆಗೂ ತಮ್ಮ ಕೀರ್ತಿಯು ಪಸರಿಸಿರುವದು. ಇದರ ಪ್ರತ್ಯಕ್ಷ ಅನುಭವ ತೆಗೆದುಕೊಳ್ಳಬೇಕೆಂದು ನನ್ನ ಅಪೇಕ್ಷೆಯುಂಟು. ಈ ಹೊತ್ತು ರಾತ್ರಿ ಒಂದು ಘಂಟೆಗೆ ಬಿಟಲದ ಅಡವಿಯಲ್ಲಿರುವ ಜೀರ್ಣ ಶಿವಾಲಯದ ಸಾನ್ನಿಧ್ಯದಲ್ಲಿ ನೀವೊಬ್ಬರೇ ಸಶಸ್ತ್ರರಾಗಿ ಬರಬೇಕು. ನಾನು ನಿಮ್ಮ ದಾರಿಯನ್ನು ನೋಡುತ್ತ ನಿಂತುಕೊಳ್ಳುವೆನು. ನೀವು ಬಾರದಿದ್ದರೆ ನಿಮ್ಮ ಕೀರ್ತಿಯು ವ್ಯರ್ಥವಾದದ್ದೆಂತಲೂ ನೀವು ವೀರಧರ್ಮದ ವಿರುದ್ಧವಾಗಿ ವರ್ತಿಸುವ ಪುಕ್ಕರೆಂತಲೂ ನಾನು ತಿಳಿದುಕೊಳ್ಳಬೇಕಾದೀತು!"

ಈ ಪತ್ರದಲ್ಲಿ ಇಷ್ಟೇ ಬರೆದಿತ್ತು. ಪತ್ರಲೇಖಕನು ಆ ಪತ್ರದ ಕೆಳಗೆ ತನ್ನ ಸಹಿ ಹಾಕುವದನ್ನು ಮರೆತಿದ್ದನೋ ಅಥವಾ ಬುದ್ಧಿಪುರಸ್ಸರವಾಗಿ ಬಿಟ್ಟಿದ್ದನೋ ಅವನಿಗೇ ಗೊತ್ತು! ಇದರ ಬಗ್ಗೆ ಮಾನಸಿಂಹನ ತರ್ಕವು

ಏನೂ ನಡೆಯಲಿಲ್ಲ. ಹಾಗೂ ತನ್ನನ್ನು ಯಾರು ಆವ್ಹಾನ ಮಾಡುತ್ತಾ ರೆಂಬುವದು ಅವನ ಲಕ್ಷ್ಯದಲ್ಲಿ ಬರಲಿಲ್ಲ. ಅವನ ಮನಸ್ಸಿನಲ್ಲಿ "ಇದೆಲ್ಲ ಶತ್ರುಗಳ ಕಪಟಕಾರಸ್ಥಾನವಿರಬಹುದು! ಶತ್ರುಗಳು ತನಗೆ ಅಪಾಯ ಮಾಡುವ ದುರಾಲೋಚನೆಯಿಂದ ತನ್ನೊಬ್ಬನನ್ನೇ ಕರೆದಿರಬಹುದು" ಎಂದು ಒಮ್ಮೆಲೆ ಅವನ ಮನಸ್ಸಿನಲ್ಲಿ ಹೊಳೆಯಿತು. ಆದ್ದರಿಂದ ಅವನು ಒರಿಯೊಳಗಿನ ತನ್ನ ಖಡ್ಗವನ್ನು ಹಿರಿದು ಝಳಪಿಸಿದನು. ಮುಂದೆ ಬೇಗನೆ ಅವನ ವಿಚಾರತರಂಗವು ಬದಲಾಗಿ "ನನ್ನನ್ನು ಅಪಾಯ ಮಾಡುವ ಸಾಮರ್ಥ್ಯವು ಯಾರಲ್ಲಿ ಉಂಟು? ನಾನು ಸಾವಿರಾರುಮಂದಿ ಸಿಪಾಯ ರನ್ನು ಭೂಮಿಯ ಮೇಲೆ ಉರುಳಾಡಿಸಿ ಬಿಟ್ಟೇನು!" ಎಂಬದಾಗಿ ಅವನಿಗೆ ತೋಚಿತು. ಮತ್ತೆ ಸ್ವಲ್ಪ ಹೊತ್ತಿನಲ್ಲಿ ಎರಡನೇ ವಿಚಾರವು ಅವನ ಮನ ಸ್ಸಿನಲ್ಲಿ ಬಂತು. "ಪತ್ರವನ್ನು ಕಳಿಸಿದವನು ಯಾವನೇ ಇರಲಿ ಅವನು ವೀರಪುರುಷನಂತೂ ಇರಲಿಕ್ಕೇ ಬೇಕು. ವೀರಪುರುಷರು ವೀರಧರ್ಮ ವನ್ನು ಮಿರಿ ಎಂದೂ ವಿಶ್ವಾಸಘಾತಮಾಡಲಾರರು! ಆದರೆ ಈ ಪತ್ರ ವನ್ನು ಬರೆದವನು ಯಾವನಿರಬೇಕು?" ಎಂದು ಪುನಃ ವಿಚಾರದಲ್ಲಿ ಮುಳುಗಿದನು.

ಮಾನಸಿಂಹನು ನಿಜವಾಗಿಯೂ ಅತ್ಯಂತ ಧೈರ್ಯಶಾಲಿಯಾದ ಪುರುಷನಿದ್ದನು. ಅವನು ತನ್ನ ಪತ್ರಲೇಖಕನ ಸೂಚನೆಯಂತೆ ಅದೇ ದಿವಸ ರಾತ್ರಿ ಕಗ್ಗತ್ತಲೆಯಲ್ಲಿ ನಿರ್ಧಿಷ್ಟಸ್ಥಾನಕ್ಕೆ ಹೋಗಲು ಹೊರಟನು. ಆ ವೀರನಿಗೆ ಏನೂ ಹೆದರಿಕೆಯು ಬರಲಿಲ್ಲ. ಯಾರಾದರೂ ತನಗೆ ವಿಶ್ವಾ ಸಘಾತಮಾಡಬಹುದೆಂಬದನ್ನು ಅವನು ಎಳ್ಳಷ್ಟಾದರೂ ಲಕ್ಷಕ್ಕೆ ತರಲಿಲ್ಲ. ಹಾಗೂ ತನ್ನ ಸಂಗಡ ಯಾವನೊಬ್ಬ ಸಂರಕ್ಷಕನನ್ನೂ ಒಯ್ಯಲಿಲ್ಲ ಆದರೆ ಅವನು ತನ್ನ ನಿರಂತರ ಪದ್ಧತಿಯ ಮೇರೆಗೆ ತನ್ನ ಸಮರ ಪತ್ನಿಯಾದ ಖಡ್ಗವನ್ನು ತನ್ನ ಸಂಗಡ ಒಯ್ದನು. ಅವನು ಬಹಳೊತ್ತಿನ ವರೆಗೆ ದಾರಿ ಯನ್ನು ನಡೆದ ತರುವಾಯ ಜೀರ್ಣವಾದ ಶಿವಮಂದಿರವು ಸಮಿಾಪಿಸಿತು ಆ ದೇವಾಲಯದಲ್ಲಿ ಎರಡು ದೀವಟಗೆಗಳು ಉರಿಯುತ್ತಿದ್ದವು. ಆ ದೀವ ಟಗೆಗಳ ಬೆಳಕು ಮಾನಸಿಂಹನಿಗೆ ದೂರಿನಿಂದಲೇ ಕಾಣಿಸಿದ್ದರಿಂದ ಅವನು

ಆ ಬೆಳಕಿನ ಸಹಾಯದಿಂದ ತ್ವರಿತವಾಗಿ ನಡೆದು ದೇವಾಲಯಕ್ಕೆ ಹೋಗಿ ಮುಟ್ಟಿದನು. ಮಾನಸಿಂಹನು ಆ ದೇವಾಲಯದೊಳಗೆ ಹೋಗಿ ನೋಡಲು ಭಗವೀವಸ್ತ್ರ ಪರಿಧಾನಮಾಡಿದ ಒಬ್ಬ ತರುಣ ಬ್ರಾಹ್ಮಣನು ಕೃತಾಂತ ನಂತೆ ಕೃದ್ಧಮುದ್ರೆಯನ್ನು ಧರಿಸಿ ಕೈಯಲ್ಲಿ ನಗ್ನವಾದ ಖಡ್ಗವನ್ನು ಝಳುಪಿ ಸುತ್ತ ಮಾನಸಿಂಹನನ್ನು ಕಾದುಕೊಂಡು ನಿಂತಿದ್ದನು! ಮಾನಸಿಂಹನು ಆ ಬ್ರಾಹ್ಮಣನನ್ನು ನೋಡಿದವನೇ ಗಂಭೀರ ಸ್ವರದಿಂದ "ನನ್ನನ್ನು ನೀವೇ ಆವ್ಹಾನ ಮಾಡಿದರೇನು? ಈ ಏಕಾಂತ ಸ್ಥಳಕ್ಕೆ ನನ್ನನ್ನು ಎಳಿಸಿದವರು ನೀವೋ?" ಎಂದು ಕೇಳಿದನು

ಇದಕ್ಕೆ ಆ ಬ್ರಾಹ್ಮಣನು ತುಟಿಯನ್ನು ಕಚ್ಚಿ "ಹೌದು. ನಾನೇ! ನಾನೇ!!" ಎಂದು ಉತ್ತರ ಕೊಟ್ಟನು.

ಮಾನಸಿಂಹನು ನಗನಗುತ್ತ ನೀವು ಶಾಸ್ತ್ರಾಧ್ಯಯನ ಮಾಡುವದನ್ನು ಬಿಟ್ಟು ಶಸ್ತ್ರಾಧ್ಯಯನವನ್ನು ಯಾವಾಗ ಸ್ವೀಕರಿಸಿದಿರಿ?" ಎಂದು ತಿರುಗಿ ಕೇಳಿದನು.

ಅದಕ್ಕೆ ಆ ಬ್ರಾಹ್ಮಣ ತರುಣನು ತಿರಸ್ಕಾರಯುಕ್ತ ಹಾಸ್ಯವನ್ನು ಮಾಡಿ ಕಠೋರ ವಾಣಿಯಿಂದ—"ಎಲೋ ರಾಜನೇ! ಕ್ಷತ್ರಿಯ ವೀರರು ಹಲ್ಲಲ್ಲಿ ಹುಲ್ಲುಕಡ್ಡಿಯನ್ನು ಹಿಡಿದುಕೊಂಡು, ಮುಸಲ್ಮಾನರ ದಾಸ್ಯತ್ವವನ್ನು ಸ್ವೀಕರಿಸಿ, ಮೊಗಲರ ಹೊಡತಗಳಿಂದ ಹೈರಾಣರಾಗಿ, ನಿರಪರಾಧಿಗಳೂ ನಿಷ್ಕಲಂಕರೂ ಆದ ಸಾಧ್ವೀ ಅಬಲೆಯರ ಛಲಮಾಡುವಗೋಸ್ಕರ ತಮ್ಮ ಶೌರ್ಯವನ್ನು ಪ್ರಕಾಶಗೊಳಿಸಲಿಕ್ಕೆ ಆರಂಭಮಾಡಿದಾಗಲೇ ನಾವು ನಮ್ಮ ಶಾಸ್ತ್ರವನ್ನು ಮೂಲಿಗೊತ್ತಿ ಶಸ್ತ್ರವನ್ನು ಕೈಯಲ್ಲಿ ಹಿಡಿದುಕೊಳ್ಳಬೇಕಾಯಿತು ತಿಳಿಯಿತೇ?" ಎಂದು ಉತ್ತರ ಕೊಟ್ಟನು.

"ಎಲ್ಲ ಕ್ಷತ್ರಿಯರೂ ಮುಸಲ್ಮಾನರ ದಾಸ್ಯತ್ವವನ್ನು ಸ್ವೀಕರಿಸಿಲ್ಲ, ತಿಳಿದೂ ತಿಳಿದೂ ಯಾವ ಕ್ಷತ್ರಿಯ ಅರಸನೂ ನಿರಪರಾಧಿಗಳಾದ ಅಬಲೆಯರಿಗೆ ಛಲ ಮಾಡಿರುವದಿಲ್ಲ."

"ನೀನು ಮಾಡಿರುತ್ತೀ!"

"ನಾನು? ಇದಂತೂ ಸುಳ್ಳು.

“ ವಿಚಾರಮಾಡು. ಹೊಸ ರಾಣಿಯಾದ ಸುಶೀಲೆಯ ವೃತ್ತಾಂತ ವನ್ನು ನೆನಪಿನಲ್ಲಿ ತೆಗೆದುಕೊಂಡು ಬಾ. ”

“ ಹಾ— ಅವಳಂತೂ ಮಹಾ ಪಾಪಿಷ್ಠಳು. ”

“ ದುಷ್ಟನೇ ಅವಳು ಪಾಪಿಷ್ಠಳಲ್ಲ. ನೀನೇ ಪಾಪಿಷ್ಟನು—ಅಧಮನು— ಚಾಂಡಾಲನು! ಆ ನಿಷ್ಕಲಂಕ—ನಿಷ್ಪಾಪ ಸಾಧ್ವಿಯನ್ನು ನಿಷ್ಕಾರಣವಾಗಿ ದೂಷಣಮಾಡುವ ನಿನ್ನ ಜಿಂಹ್ವೆಯು ಪಾಪಿಷ್ಠವು! ಹಾಗೂ ನಿನ್ನ ಹೃದ ಯುವು ಪಾಪಿಷ್ಠವು! ಆ ಸಮಯಕ್ಕೆ ನಿನ್ನ ಕಣ್ಣುಗಳು ಕುರುಡಾಗಿದ್ದರಿಂದಲೂ ನಿನ್ನ ಬುದ್ಧಿಯು ಭ್ರಂಶವಾಗಿದ್ದರಿಂದಲೂ ನೀನು ಮನುಷ್ಯವರ್ಗಕ್ಕೆಲ್ಲ ನಾಚಿಕೆಯನ್ನು ತರುವಂಥ ಕೆಲಸವನ್ನು ಮಾಡಿದಿ! ”

ಈ ಶಬ್ದಗಳು ಮಾನಸಿಂಹನ ಕಿವಿಗೆ ಬಿದ್ದಕ್ಷಣವೇ ಅವನು ತನ್ನ ಖಡ್ಗವನ್ನು ಒರಿಯೊಳಗಿಂದ ಹಿರಿದು ಕರ್ಕಶ ಸ್ವರದಿಂದ—“ ಎಲೈ ಗರ್ವಿಷ್ಠ ನಾದ ಬ್ರಾಹ್ಮಣನೇ! ನಿನ್ನ ನಾಲಿಗೆಯನ್ನು ಬಿಗಿಹಿಡಿ. ಮಹಾರಾಜ ಮಾನ ಸಿಂಹನು ಯಾರಿಗೂ ಇಂಥ ಶಬ್ದಗಳನ್ನು ಉಚ್ಚರಿಸಿಗೊಡುವವನಲ್ಲ. ನೀನು ಬ್ರಾಹ್ಮಣನಿರುವದರಿಂದಲೇ ಇಷ್ಟು ಹೊತ್ತಿನತನಕ ಬದುಕಿಕೊಂಡಿ. ಇಲ್ಲ ದಿದ್ದರೆ ನಿನಗೆ ಆಗಲೇ ದೇಹಾಂತಶಿಕ್ಷೆಯನ್ನು ಮಾಡುತ್ತಿದ್ದೆನು. ಬಾಯಿ ಮುಚ್ಚು ” ಎಂದು ಗದ್ದರಿಸಿ ನುಡಿದನು.

“ ರಾಜನೇ, ನಾನು ಬ್ರಾಹ್ಮಣನಿರದೆ ನೀನು ನನ್ನನ್ನು ಬ್ರಾಹ್ಮಣನಾಗಿ ತಿಳಕೊಂಡಿರುವಿ. ಅಂತೇ ನೀನು ಕುರುಡನೂ ಭ್ರಮಿಷ್ಠನೂ ಆಗಿರುವಿ. ಇಂಥ ಭ್ರಮಿಷ್ಠತೆಯಿಂದ ನೀನು ನಿರಪರಾಧಿಯೂ ಮಹಾಪತಿವ್ರತೆಯೂ ಆದ ಸುಶೀಲೆಯನ್ನು ದೂಷಿತಳಾಗಿ ಭಾವಿಸಿ ಅವಳ ಜನ್ಮವನ್ನು ಮಣ್ಣು ಪಾಲು ಮಾಡಿದಿ. ”

“ ಏನು? ನೀನು ಬ್ರಾಹ್ಮಣನಲ್ಲವೇ? ಹಾಗಾದರೆ ನೀನು ಯಾರಿದ್ದೀ ಎಂಬುವದನ್ನು ಬೇಗನೆ ಹೇಳಿ ನಿನ್ನ ಪಾಪದ ಪ್ರಾಯಶ್ಚಿತ್ತವನ್ನು ಭೋಗಿಸ ಲಿಕ್ಕೆ ಸಿದ್ಧನಾಗು. ನನ್ನನ್ನು ಇಲ್ಲಿ ಯಾಕೆ ಕರಿಸಿದೆಂಬುವದನ್ನು ಹೇಳು!

“ ರಾಜನೇ, ನೀನು ಈ ಪ್ರಕಾರ ತಾಮಸಿಯಾಗಬೇಡ. ನಿನ್ನ ಪಾಪದ ಪ್ರಾಯಶ್ಚಿತ್ತವನ್ನು ಕೊಡುವದಕ್ಕಾಗಿ ನಾನು ನಿನ್ನನ್ನು ಇಲ್ಲಿ ಕರಿಸಿರುತ್ತೇನೆ.

ಅದನ್ನು ನೀನು ಬೇಗನೆ ಅನುಭವಿಸಬೇಕಾಗುವದು. ನೀನು ಹಿಂದಕ್ಕೊಮ್ಮೆ ನನ್ನ ಭಾಷಣದಿಂದಲೂ ವೇಷದಿಂದಲೂ ಮೋಸಪಟ್ಟಿರುವೆ. ಆಗ ನೀನು ಮನಸ್ಸನ್ನು ಶಾಂತವಿಟ್ಟು ವಿಚಾರಿಸಿದ್ದರೆ ಆ ನಿರಪರಾಧಿಯಾದ ರಾಣಿಯ ಅವಸ್ಥೆಯು ಈ ಪ್ರಕಾರ ಆಗುತ್ತಿದ್ದಿಲ್ಲ" ಈ ಪ್ರಕಾರ ಮಾತನಾಡುತ್ತಿರುವಾಗ್ಗೆ ಆ ಬ್ರಾಹ್ಮಣನ ಕಣ್ಣೊಳಗಿಂದ ಒಂದೇಸವನೆ ಕಣ್ಣೀರುಗಳು ಉದುರಿದವು ಆಗ ಮಾನಸಿಂಹನು ದೀವಟಗೆಯ ಬೆಳಕಿನಿಂದ ಆ ಬ್ರಾಹ್ಮಣನ ಮ್ಲಾನಮುಖವನ್ನು ನೋಡುತ್ತ, ವಿಚಾರದಲ್ಲಿ ಮಗ್ನನಾಗಿ, ಚಿತ್ರದೊಳಗಿನ ಗೊಂಬೆಯಂತೆ ತಟಸ್ಥನಾಗಿ ನಿಂತನು. ಇದೇನು ಬಂಗಾಲೀ ವಿದ್ಯೆಯ ಆಟವು! ಇದರ ಇಂಗಿತವಾದರೂ ವಿನಿರುವದು!

ಆ ಬ್ರಾಹ್ಮಣ ವೇಷಧಾರಿಯು ತನ್ನ ಭಗವೀ ವಸ್ತ್ರಗಳನ್ನೂ ಕೃತ್ರಿಮ ಜಟಾಭಾರವನ್ನೂ ಕೃತ್ರಿಮ ಗಡ್ಡಮೀಸೆಗಳನ್ನೂ ತೆಗೆದು ದೂರ ಬಿಸಾಡಿ ಬಿಟ್ಟು ತನ್ನ ಖಡ್ಗವನ್ನು ಝಳುಪಿಸುತ್ತ ಮಾನಸಿಂಹನಿಗೆ ಆವ್ಹಾನ ಮಾಡಿ "ಅಧಮನೇ, ಇನ್ನು ಮರಣಕ್ಕೆ ಸಿದ್ಧನಾಗು" ಎಂದು ಭಯಂಕರವಾಗಿ ಗರ್ಜನೆಯನ್ನು ಮಾಡಿದನು.

ಈ ಬ್ರಾಹ್ಮಣ ವೇಷಧಾರಿಯಾದ ತರುಣನು ತನ್ನ ಪರಮಮಿತ್ರನಾದ ಫೈಜಿ ಎಂಬುವದು ತಿಳಿದ ಮಾತ್ರದಿಂದ ಮಾನಸಿಂಹನು ಶಿಲಾಪ್ರತಿಮೆಯಂತೆ ಅಚೇತನನಾಗಿ ನಿಂತುಕೊಂಡನು ಅವನ ತರ್ಕವು ಏನೂ ನಡೆಯಲಿಲ್ಲ. ಫೈಜಿಗೂ, ಸುಶೀಲೆಗೂ ಏನು ಸಂಬಂಧವೆಂಬುವದು ಅವನಿಗೆ ತಿಳಿಯದಾಯಿತು ಅವನ ಮತಿಯು ಕುಂಠಿತವಾಯಿತು. ಆಗ ಅವನು ತನ್ನ ಖಡ್ಗವನ್ನು ದೂರ ಚಲ್ಲಿಕೊಟ್ಟು "ಮಿತ್ರಾ! ಸ್ತ್ರೀ, ಬ್ರಾಹ್ಮಣ ಮತ್ತು ಮಿತ್ರ ಈ ಮೂರು ವರ್ಗದವರ ಮೇಲೆ ಅವರು ಎಷ್ಟು ಅಪರಾಧಿಗಳಿದ್ದರೂ ಮಾನಸಿಂಹನ ಖಡ್ಗವು ಎಂದೂ ನಡೆಯಲಾರದು! ನಾನು ಅಪರಾಧಿಯೆಂದು ನಿನಗೆ ನಿಶ್ಚಯವಾಗಿ ಕಾಣುತ್ತಿದ್ದರೆ ನನ್ನ ಕುತ್ತಿಗೆಯನ್ನು ಹಾರಿಸಿ ಬಿಡು. ಇಕೋ, ನನ್ನ ಕುತ್ತಿಗೆಯನ್ನು ನಿನ್ನ ಮುಂದೆ ಚಾಚುವೆನು. ಆದರೆ ಹಾಗೆ ಮಾಡುವ ಮುಂಚೆ ನನ್ನ ಮುಂದೆ ನೀನು ಆಡಿದ ಮಾತಿನ ರಹಸ್ಯವನು ತಿಳಿಸಿಹೇಳು. ನಿನಗೆ ಇದೊಂದೇ ನನ್ನ ವಿನಂತಿಯುಂಟು ರಾಣಿಗೂ ನಿನಗೂ ಏನು

ಸಂಬಂಧವಿರುವದು? ಇಷ್ಟೊಂದು ನನ್ನ ಮನಸ್ಸಿನ ಉತ್ಕಂಠತೆಯನ್ನು ಶಾಂತಮಾಡಿ ನನ್ನ ತಲೆಯನ್ನು ಹಾರಿಸು. ಮಿತ್ರನ ಮನೋದಯವನ್ನು ಪೂರ್ಣ ಮಾಡುವದಕ್ಕಾಗಿ ನನಗೆ ಮರಣವನ್ನು ಸ್ವೀಕರಿಸುವ ಪ್ರಸಂಗವು ಬಂದರೂ ನಾನು ಅದಕ್ಕೆ ಆನಂದದಿಂದ ಒಡಂಬಡುವೆನು!"

ಫ್ರೈಜಿಯು ಈ ಸಮಯದಲ್ಲಿ ಕೃಂತಾಂತನಂತೆ ಕೃದ್ಧನಾಗಿ, ಮಾನಸಿಂಹನನ್ನು ಮೊದಲಿಗೆ ಕೊಂದು ತಾನೂ ಹಿಂದಗಡೆ ಜೀವನ್ಮುಕ್ತನಾಗುವ ಸಂಕಲ್ಪವನ್ನು ಮಾಡಿಕೊಂಡು ಬಂದಿದ್ದರೂ ಅವನಲ್ಲಿಯೂ ಮನುಷ್ಯತ್ವ ಏದ್ದದರಿಂದ ಅವನ ಕೈಯೊಳಗಿನ ಖಡ್ಗವು ತಾನೇ ಭೂಮಿಯ ಮೇಲೆ ಕೆಳಗೆ ಬಿದ್ದಿತು! ಆ ಮೇಲೆ ಫ್ರೈಜಿಯು ಮಾನಸಿಂಹನಿಗೆ ಬಿಗಿಯಾಗಿ ಅಪ್ಪಿಕೊಂಡು "ಮಿತ್ರಾ, ಸುಶೀಲೆಯು ನನ್ನ ತಂಗಿಯು. ಬಾಲ್ಯದಿಂದಲೂ ನಾವು ಉಭಯತರು ಆ ಪವಿತ್ರ ಸಂಬಂಧದಿಂದ ಬದ್ಧರಾಗಿರುತ್ತೇವೆ. ಭಗಿನಿಯಗೋಸ್ಕರ ಬೇಕಾದ್ದು ಮಾಡುವದು ನನ್ನ ಕರ್ತವ್ಯವೇ ಇರುವದು." ಎಂದು ನುಡಿದನು.

ಉಭಯತರು ಭೂಮಿಯ ಮೇಲೆ ಕುಳಿತುಕೊಂಡರು. ಆ ಬಳಿಕ ಫ್ರೈಜಿಯು ಸಾದ್ಯಂತ ವೃತ್ತಾಂತವನ್ನು ತಿಳಿಸಿದನು. ಆಗ ಮಾನಸಿಂಹನ ಹೃದಯದಲ್ಲಿದ್ದ ಸಂಶಯಾಗ್ನಿಯು ಸುಟ್ಟು ಭಸ್ಮವಾಗಿ ಅವನ ಪ್ರೇಮಜಲವು ಕಸುವಿನಿಂದ ತುಂಬಿ ತುಳುಕಿ ಹೊರಚಲ್ಲಿತು. ಉಭಯ ಮಿತ್ರರು ಒಬ್ಬರನ್ನೊಬ್ಬರು ನೋಡುತ್ತ ಸುಶೀಲೆಯನ್ನು ನೆನೆಸಿ ಬಹಳೊತ್ತಿನ ವರೆಗೆ ಆ ನಿರ್ಜನವಾದ ಸ್ಥಳದಲ್ಲಿ ಅಶ್ರುಪ್ರವಾಹವನ್ನು ಹರಿಸಿದರು. ಆ ಮೇಲೆ ತುಸು ಹೊತ್ತಿನ ತರುವಾಯ ಮಾನಸಿಂಹನು ಗದ್ಗದಿತ ಸ್ವರದಿಂದ "ಮಿತ್ರಾ, ರಾಣಿಯು ಎಲ್ಲಿರುವಳು? ನನ್ನ ಪ್ರಿಯ ಪಟ್ಟರಾಣಿಯಾದ ಸುಶೀಲೆಯು ಎಲ್ಲಿ?" ಎಂದು ಕೇಳಿದನು.

ಅದಕ್ಕೆ ಫ್ರೈಜಿಯು ದುಃಖದಿಂದ ಕುತ್ತಿಗೆಯ ಸಿರ ಉಬ್ಬಿದವನಾಗಿ "ಮಹಾರಾಜನೇ, ಅವಳು ಇನ್ನು ಮೇಲೆ ನಿನಗೆ ದೊರೆಯಲಾರಳು. ಸಾಂಪ್ರತಕ್ಕೆ ಅವಳು ಈ ಸಂಸಾರದಲ್ಲಿಲ್ಲ. ಅವಳನ್ನು ನೀನು ಕಣ್ಣಾರೆ ನೋಡಬಹುದು. ಆದರೆ ನಿನ್ನ ದೃಷ್ಟಿಯಿಂದ ಅವಳು ಈಗ ಮೃತಳಾಗಿರುವಳು." ಎಂದು ಉತ್ತರ ಕೊಟ್ಟನು.

ಫೈಜಿಯೇ, ಆ ಸಾಧ್ವಿಯು ನನಗೆ ಲಭಿಸಲಿ, ಲಭಿಸದಿರಲಿ. ನಾನು ಆ ದೇವಿಯನ್ನು ಒಮ್ಮೆಯಾದರೂ ಕಣ್ಣುತುಂಬ ನೋಡಿ, ಅವಳ ಚರಣಕಮಲವನ್ನು ನನ್ನ ಪ್ರಾಯಶ್ಚಿತ್ತಜನ್ಯ ನೇತ್ರಾಶ್ರುಗಳಿಂದ ತೋಯಿಸಿ ಪಾವನನಾಗುವೆನು. ನನ್ನನ್ನು ಆ ಪತಿವ್ರತೆಯ ಕಡೆಗೆ ತೆಗೆದುಕೊಂಡು ಹೋಗು" ಎಂದು ಮಾನಸಿಂಹನು ಫೈಜಿಗೆ ಅಂಗಲಾಚಿ ಹೇಳಿದನು.

# ಭಾಗ ೧೬.

## ಸಾಧ್ವಿಯು.

ಆ ನಿಬಿಡಾಂಧಃಕಾರದಲ್ಲಿ ಫೈಜಿಯೂ ಮಾನಸಿಂಹನೂ ಸುಶೀಲೆಯ ದರ್ಶನಕ್ಕೋಸ್ಕರ ಹೊರಟರು. ಅವರು ಈ ಪ್ರಕಾರ ಮಾರ್ಗಕ್ರಮಣ ಮಾಡುತ್ತ ಅನೇಕ ಅಡ್ಡದಾರಿಗಳನ್ನೂ, ಕೊಳ್ಳಗಳನ್ನೂ, ಗುಡ್ಡಗಾಡು ಗಳನ್ನೂ ದಾಟಿದ ತರುವಾಯ ಒಂದು ಗವಿಯ ಸಮೀಪಕ್ಕೆ ಬಂದರು. ಅಲ್ಲಿ ಅವರು ಆ ಗವಿಯ ಬಾಯಿ ಮುಚ್ಚಿದ ಕಲ್ಲನ್ನು ಒಂದು ಮಗ್ಗಲಿಗೆ ಸರಿಸಿ, ಒಳಗೆ ಪ್ರವೇಶಮಾಡುವಷ್ಟರಲ್ಲಿ ಫೈಜಿಯು ಮಾನಸಿಂಹನಿಗೆ "ಈ ಗವಿಯೊಳಗೆ ಅಪರಿಚಯಸ್ಥರನ್ನು ಕರೆದುಕೊಂಡು ಬರಬೇಕಾದರೆ ಅವರ ಕಣ್ಣುಕಟ್ಟಿ ಒಳಗೆ ತರಬೇಕೆಂದು ಪೂಜ್ಯ ಸನ್ಯಾಸಿಯು ನಿಯಮವನ್ನು ವಿಧಿಸಿರುತ್ತಾನೆ. ಆದ್ದರಿಂದ ಆ ನಿಯಮವನ್ನು ನೀನು ಪಾಲಿಸಬೇಕು" ಎಂದು ಹೇಳಿದನು.

ಮಾನಸಿಂಹನು ಸುಶೀಲೆಯ ದರ್ಶನಕ್ಕಾಗಿ ಬಹಳ ಉತ್ಕಂಠಿತನಾ ಗಿದ್ದರಿಂದ ಫೈಜಿಯು ಹೇಳಿದ ಕೂಡಲೆ ಮಾನಸಿಂಹನು ತನ್ನ ಕಣ್ಣಿನ ಮೇಲೆ ಅರಿವೆಯ ಪಟ್ಟಿಯನ್ನು ಕಟ್ಟಿಕೊಂಡು ಫೈಜಿಯ ಬೆನ್ನ ಹಿಂದೆ ನಡೆದನು. ಈ ಪ್ರಕಾರ ಅವನು ಕೆಲವು ಹೊತ್ತು ಮುಂದಕ್ಕೆ ನಡೆದ ತರುವಾಯ ಫೈಜಿಯು ಅವನ ಕಣ್ಣಿನ ಮೇಲೆ ಕಟ್ಟಿದ್ದ ಅರಿವೆಯ ಪಟ್ಟಿಯನ್ನು ಬಿಚ್ಚಿ ಅವನಿಗೆ ಕೈಸನ್ನೆ ಮಾಡಿ ಅತ್ತಕಡೆಗೆ ಮುಂದೆ ಹೋಗೆಂದು ಹೇಳಿ ದನು. ಆ ಪ್ರಕಾರ ಮಾನಸಿಂಹನು ಒಬ್ಬನೇ ಮುಂದೆ ಹೋಗಿ, ಕೆಲವು

ಹೊತ್ತಿನ ಮೇಲೆ ಒಂದು ಕಲ್ಲಿನ ನೆಲಮನೆಯಲ್ಲಿ ಪ್ರವೇಶಮಾಡಲು ಅಲ್ಲಿ ತಪಸ್ವಿಯ ಉಡುಪುಗಳನ್ನು ಧರಿಸಿದ್ದ ಸುಶೀಲೆಯು ದೇವರ ಪೂಜೆಯನ್ನು ಮಾಡುವಲ್ಲಿ ತೊಡಗಿದ್ದಳು. ಅದನ್ನು ನೋಡಿ ಮಾನಸಿಂಹನು ಆಶ್ಚರ್ಯ ಚಕಿತನಾದನು. ಸ್ವರ್ಗದ ತೇಜಸ್ಸಿನಿಂದ ದೇದೀಪ್ಯಮಾನವಾದ ಪವಿತ್ರ ಮೂರ್ತಿಯನ್ನು ಕಂಡು ಇನ್ನು ಮೇಲೆ ಅವಳನ್ನು ತನ್ನ ಕಲುಷಿತ ಪ್ರೇಮದ ಪಾಲುಗಾರಳಾಗಲಿಕ್ಕೆ ಆವ್ಹಾನಮಾಡುವ ಅಧಿಕಾರವು ತನಗೆ ಕಿಂಚಿತ್ತಾದರೂ ಇಲ್ಲೆಂದು ತಿಳಿದಕೂಡಲೆ ಮಾನಸಿಂಹನ ವಿಷಯಪೀಡಿತ ಹೃದಯವು ಲಜ್ಜಿತವಾಯಿತು. ಆದ್ದರಿಂದ ಅವನು ಅಧೋವದನನಾಗಿ ನಿಂತುಕೊಂಡನು. ಕೆಲವು ಹೊತ್ತಿನ ತರುವಾಯ ಅವನು ತನ್ನ ಕುತ್ತಿಗೆಯನ್ನು ಮೇಲಕ್ಕೆ ಎತ್ತಿ ನೋಡುವಷ್ಟರಲ್ಲಿ ಒಂದು ಗೋಡೆಯ ಮೇಲೆ ಸುಶೀಲೆಯ ಎದುರಿಗೆ ಒಂದು ಭಾವಪಟವು ತೂಗಾಡುತ್ತಿತ್ತು. ಆ ಭಾವಪಟದ ಕಾಲಿನ ಕೆಳಗೆ ತುಲಸೀ ಪತ್ರದ ಮತ್ತು ಹೂಗಳ ರಾಶಿಯು ಬಿದ್ದಿತ್ತು. ಧೂಪದೀಪಗಳು ಉರಿಯುತ್ತಿದ್ದವು. ಆ ಭಾವಪಟದ ಸಮೀಪದಲ್ಲಿ ದೇವರ ಪೂಜೆಯ ಸರ್ವಸಾಹಿತ್ಯಗಳು ಇಡಲ್ಪಟ್ಟಿದ್ದವು. ಹಾಗೂ ಸುಶೀಲೆಯು ಆ ಭಾವಪಟದ ಕಡೆಗೆ ಏಕಾಗ್ರದೃಷ್ಟಿಯಿಂದ ನೋಡುತ್ತ ಅದಕ್ಕೆ ವಂದನ ಮಾಡುತ್ತ ಧ್ಯಾನಮಗ್ನಳಾಗಿದ್ದಳು.

ಅಹಹ! ಏನು ಸುಂದರ ಧ್ಯಾನವಿದು! ಈ ರಮಣೀಯ ಮತ್ತು ದೇವದುರ್ಲಭವಾದ ಸೌಂದರ್ಯಕ್ಕೆ ಸಮನಾದದ್ದು ತ್ರೈಲೋಕ್ಯದಲ್ಲಿ ಸಹ ಯಾವದೂ ಇಲ್ಲ! ಮಾನಸಿಂಹನು ತನ್ನ ಮನಸ್ಸಿನಲ್ಲಿ ಅಂದುಕೊಂಡದ್ದೇನಂದರೆ—"ಹಿಂದಕ್ಕೊಮ್ಮೆ ಇದೇ ಸುಶೀಲೆಯು ಮಣಿರತ್ನಮುಕ್ತಾಲಂಕಾರದಿಂದ ವಿಭೂಷಿತಳಾಗಿ ತನ್ನ ಅತುಲ್ಯವಾದ ರೂಪಜ್ಯೋತಿಯಿಂದ ಅಂಬರದ ರಾಜಮಂದಿರವನ್ನು ಸುಶೋಭಿತಮಾಡಿ ನನ್ನ ಹೃದಯ ಮಂದಿರದ ಉಚ್ಚಾಸನದ ಮೇಲೆ ವಿರಾಜಮಾನಳಾಗಿದ್ದಳು. ಈ ಹೊತ್ತು ಅವಳು ಅಲಂಕಾರರಹೀನಳು ಮತ್ತು ಭಗವೀವಸ್ತ್ರಪರಿವೇಷ್ಟಿತಳು ಆಗಿದ್ದಾಗ್ಯೂ ಎಷ್ಟು ಪಾಲು ಹೆಚ್ಚಿಗೆ ರಮಣೀಯಳೂ, ಸುಂದರಳೂ, ತೇಜಸ್ವಿಯೂ, ಕಾಣುವಳು! ಸೃಷ್ಟಿಕರ್ತನಾದ ಬ್ರಹ್ಮದೇವನೇ! ನಿನ್ನ ಧನ್ಯವಾದವನ್ನು ನಾನು

ಎಷ್ಟು ಮಾಡಿದರೂ ಕಡಿಮೆ! ಇಂಥ ಅದ್ವಿತೀಯ ಸೌಂದರ್ಯವನ್ನು ನಿರ್ಮಾಣ ಮಾಡಲಿಕ್ಕೆ ನೀನು ಎಷ್ಟು ಶ್ರಮವನ್ನೂ ಕೌಶಲ್ಯವನ್ನೂ ಉಪಯೋಗಿಸಿರಬಹುದೆಂಬುವದನ್ನು ತರ್ಕಿಸುವದು ಸಹ ಅಸಾಧ್ಯವು!"

ಆಕೆಯ ತಲೆಯ ಸುಂದರ ಕೂದಲುಗಳು ಗಲ್ಲದ ಮೇಲೆ ಪಸರಿಸಿ ಮೇಲಿಂದ ಮೇಲೆ ಗಲ್ಲದ ಚುಂಬನ ತೆಗೆದುಕೊಂಡು ಆಕೆಯ ಬೆನ್ನ ಮೇಲೂ ಭುಜದ ಮೇಲೂ ವಕ್ಷಸ್ಥಳದ ಮೇಲೂ ಮಾರುತನೊಂದಿಗೆ ಮಾಡುತ್ತಿದ್ದ ಕ್ರೀಡೆಯು ನಿಜವಾಗಿಯೂ ನಯನ ಮನೋಹರವಾಗಿತ್ತು! ಕೃಷ್ಣತಾರಕಾಮಯವಾಗಿದ್ದ ಆಕೆಯ ನೇತ್ರಗಳು ಆಕೆಯ ಸನ್ಮುಖದಲ್ಲಿಟ್ಟಿದ್ದ ಭಾವಪಟದೊಳಗಿನ ಸುಂದರಮೂರ್ತಿಯನ್ನು ನಖಶಿಖಾಂತ ಅವಲೋಕನ ಮಾಡುವಲ್ಲಿ ಸ್ಥಿರವಾಗಿದ್ದವು! ಆಕೆಯ ಬಿಂಬಾಧರದ ಮೇಲೆ ಏನೋ ಒಂದು ಪ್ರಕಾರದ ಮೃದುಹಾಸ್ಯವು ದೃಗ್ಗೋಚರವಾಗುತ್ತಿತ್ತು! ಆಕೆಯ ನಿಶ್ಚಲವಾದ ದೇಹದ ನಾಲ್ಕೂ ಭಾಗದಲ್ಲಿ ಸೌಂದರ್ಯದ ತೆರೆಯು ಉಕ್ಕೇರಹತ್ತಿತ್ತು! ಅಂಬರೇಶ್ವರನ ರಾಣಿಯಕಿಂತಲು ತಪಸ್ವಿನಿಯಾದ ಸುಶೀಲೆಯು ಎಷ್ಟುಪಟ್ಟು ಹೆಚ್ಚಿಗೆ ಸುಂದರಳೂ ತೇಜಸ್ವಿಯೂ ಮನೋಹರಳೂ ಕಾಣುತ್ತಿದ್ದಳೆಂಬುವದನ್ನು ವರ್ಣಿಸುವದು ಪ್ರತ್ಯಕ್ಷ ವಾಗ್ದೇವಿಗೆ ಸಹ ಅಸಾಧ್ಯವು! ಈ ಸೌಂದರ್ಯಲತಿಕೆಯನ್ನು ಕಂಡು ಮಾನಸಿಂಹನು ಕಳವಳಗೊಂಡು ತನ್ನನ್ನು ತಾನೇ ಧಿಕ್ಕರಿಸಿಕೊಳ್ಳುತ್ತ ತನ್ನ ಮನಸ್ಸಿನಲ್ಲಿ ಅಂದುಕೊಂಡದ್ದೇನಂದರೆ— "ಯಾವಾಗಲು ಯುದ್ಧವ್ಯವಸಾಯದಲ್ಲಿ ಪರಮಾಲ್ಹಾದವನ್ನು ಹೊಂದುವಂಥ ಪಾಷಾಣಹೃದಯವುಳ್ಳ ಕ್ರೂರ ರಾಕ್ಷಸನು ನಾನು! ನನ್ನಂಥ ಅಧಮನಿಗೆ ಈ ರಮಣಿಯ ಮಧುರ ಪ್ರೇಮವು ಹೇಗೆ ಲಭಿಸಬೇಕು? ಸ್ವತಃ ನನ್ನ ಮೇಲೆ ನನಗೆ ವಿಶ್ವಾಸವಿಲ್ಲದಿರುವಾಗ ಈ ದೇವಕನ್ಯೆಯ ಮೇಲೆ ವಿಶ್ವಾಸವಿಡುವ ಸಾಮರ್ಥ್ಯವು ನನಗೆ ಎಲ್ಲಿಂದ ಬರಬೇಕು? ಅಸಂಖ್ಯಲಾವಣ್ಯವತಿಯರಾದ ಯುವತಿಯರೊಡನೆ ಉನ್ಮತ್ತತನದಿಂದ ವಿಲಾಸಮಗ್ನನಾಗಿರುವ ಈ ಪಾಪಿಷ್ಠನಿಗೆ ಸ್ವರ್ಗದಲ್ಲಿಯ ಪ್ರೇಮದ ಮರ್ಮವು ಹೇಗೆ ತಿಳಿಯಬೇಕು?"

ಈ ಪ್ರಕಾರ ತನ್ನ ಮನಸ್ಸಿನಲ್ಲಿ ವಿಚಾರಮಾಡುತ್ತ ನಿಂತಿರುವಾಗ ಮಾನಸಿಂಹನ ಕಣ್ಣೊಳಗಿಂದ ಒಂದೇಸವನೆ ಕಣ್ಣೀರಿನ ಹನಿಗಳು ಟಪಟಪ ಉದುರಿದವು ಅವನ ಹೃದಯವು ಕಿಂಚಿತ್ತು ಸ್ಥಿರವಾದ ಬಳಿಕ ಅವನು ಮುಂದಕ್ಕೆ ಸರಿದು ಆ ಭಾವಪಟದ ಕಡೆಗೆ ದೃಷ್ಟಿಸಿ ನೋಡಿದನು. ಆ ಭಾವಪಟದೊಳಗಿನ ಮೂರ್ತಿಯನ್ನು ಅವನು ಕಂಡಕೂಡಲೆ ಅತ್ಯಂತ ಆಶ್ಚರ್ಯಚಕಿತನಾದನು. ಅವನ ಹೃದಯವೆಲ್ಲ ಬೆವರು ಒಡೆಯಿತು. ಅಂಬರದ ರಾಜಧಾನಿಯಲ್ಲಿ ತಾನು ಒಂದು ದಿವಸ ಸುಶೀಲೆಗೆ ಪ್ರೇಮದಿಂದ ಅರ್ಪಿಸಿದಂಥ ಹಾಗೂ ಸುಶೀಲೆಯು ಯಾವಾಗಲು ತನ್ನ ಕಣ್ಣಮರೆಯಾಗ ದಂತೆ ಪ್ರೀತಿಯಿಂದ ಜೋಕೆ ಮಾಡಿ ಇಟ್ಟುಕೊಳ್ಳುತ್ತಿದ್ದಂಥ ಆ ತನ್ನ ಭಾವಪಟವೇ ಇದು! ಪತಿಪ್ರೇಮನಿರತಳೂ ಏಕಾಂತಾನುರಕ್ತ ಸಾಧ್ವಿಯೂ ಆದ ಸುಶೀಲೆಯು ಈ ಪ್ರಕಾರ ತನ್ನ ಭಾವಪಟವನ್ನು ಪೂಜಿಸುವಲ್ಲಿ ತಲ್ಲೀ ನಳಾದದ್ದನ್ನು ಕಂಡು, ಅವನು ಸಿಡಿಲು ಬಡೆದವನಂತೆ ಎದೆಯೊಡೆದು ತನ್ನ ಅಪರಾಧಕ್ಕೆ ಎಣೆಯೂ ತನ್ನ ಪಾಪಕ್ಕೆ ಪರಿಮಿತಿಯೂ ಉಳಿಯಲಿಲ್ಲವೆಂದು ನೋಡಿ ತಾನು ವ್ಯರ್ಥವಾಗಿ ಈ ಸಚ್ಚರಿತ್ರಳಾದ ಸಾಧ್ವಿಯ ಛಲಮಾಡಿ ದೆನೆಂದು ಚಿಂತಿಸುತ್ತ ಒಮ್ಮೆಲೆ ದೊಡ್ಡ ಧ್ವನಿಯಿಂದ "ಸುಶೀಲೇ" ಎಂದು ಒದರಿ ಅಳಹತ್ತಿದನು.

ಧ್ಯಾನಮಗ್ನಳಾದ ಸುಶೀಲೆಗೆ ಇಷ್ಟೊತ್ತಿನ ತನಕ ನಡೆದಿದ್ದ ಸಂಗತಿ ಗಳು ಏನೂ ಗೊತ್ತಾಗಿದ್ದಿಲ್ಲ. ಅವಳು ಈ ಅಳುವ ಧ್ವನಿಯನ್ನು ಕೇಳಿದ ಕೂಡಲೆ ಎಚ್ಚತ್ತು ಅಚ್ಚರೆಯಿಂದ ನೋಡಲಾಗಿ ತನ್ನ ಪತಿದೈವತವು ತನ್ನ ಮುಂದೆ ಕೈಜೋಡಿಸಿ ನಿಂತದ್ದನ್ನು ಕಂಡಳು! ಆಗ ಅವಳು—"ಅಹಹಾ! ಪತಿದೈವತದ ದಯಾಲುತನವು ದೇವರಕಿಂತಲು ಹೆಚ್ಚಿನದು! ದೇವರಿಗೆ ಎಷ್ಟು ಭಕ್ತಿಪೂರ್ವಕವಾಗಿ ಪೂಜಿಸಿದರೂ ಆತನು ಈ ಜನ್ಮದಲ್ಲಿ ದರ್ಶನ ಕೊಡುವದಿಲ್ಲ. ಆದರೆ ಪತಿದೈವತವು ದರ್ಶನಕೊಡುವದಕ್ಕೋಸ್ಕರ ಇಲ್ಲಿಗೆ ಒತ್ತರಿಸಿ ಬಂದಿರುವದು -" ಎಂದು ನುಡಿದು ತನ್ನ ಯಾವತ್ತು ಹಿಂದಿನ ವರ್ತಮಾನವನ್ನೂ ಮಾನ, ಅಪಮಾನ ಮತ್ತು ಅಭಿಮಾನಗಳನ್ನೂ ಕ್ಷಣಾ ರ್ಧದಲ್ಲಿ ಮರೆತುಬಿಟ್ಟಳು. ಅವಳಿಗೆ ತನ್ನ ದೇಹವು, ಗುಹೆಯು,- ಬಹಳ

ವೇನು? ಯಾವತ್ತು ವಿಶ್ವವು–ಮಾನಸಿಂಹಮಯವಾಗಿ ಕಾಣಿಸಹತ್ತಿತು. ಆಗ ಸುಶೀಲೆಯು ಮೆಲ್ಲನೆ ಎದ್ದು ನಿಂತು ಮಾನಸಿಂಹನ ಮುಂದೆ ತನ್ನ ಎರಡೂ ಕೈಜೋಡಿಸಿ–"ಹೃದಯೇಶ್ವರ! ನೀವು ಪರಮ ದಯಾಲುತನ ದಿಂದ ದಾಸಿಗೆ ದರ್ಶನ ಕೊಡುವದಕ್ಕಾಗಿ ಇಲ್ಲಿಗೆ ಒತ್ತರಿಸಿ ಬಂದಿರಿ. ಇದ ಕ್ಕಾಗಿ ನಿಮ್ಮ ಉಪಕಾರವನ್ನು ನಾನು ಎಷ್ಟೆಂತ ವರ್ಣಿಸಲಿ? ಇಕೋ ನೋಡಿರಿ! ನಿಮಗೋಸ್ಕರ ನಾನು ಸಿಂಹಾಸನವನ್ನು ಸಿದ್ಧಮಾಡಿರುತ್ತೇನೆ. ನೀವು ಈ ಸಿಂಹಾಸನದ ಮೇಲೆ ಸ್ವಲ್ಪಹೊತ್ತು ಆರೂಢರಾಗಿರಿ. ನಾನು ಇಲ್ಲಿ ತೆಗೆದುಕೊಂಡು ಬಂದಿರುವ ಹೂಗಳಿಂದ ನಿಮ್ಮ ಪೂಜೆಯನ್ನು ಮಾಡುತ್ತೇನೆ ನಿಮಗೆ ಸುಗಂಧಮಾಲೆಯು ಹೆಚ್ಚಾಗಿ ಸೇರುತ್ತದೆಂದು ನಾನು ಬಹಳ ಶ್ರಮಪಟ್ಟು ಈ ಪುಷ್ಪಮಾಲಿಕೆಯನ್ನು ರಚಿಸಿರುತ್ತೇನೆ. ಅದನ್ನು ನಾನು ನಿಮ್ಮ ಚರಣದ ಮೇಲೆ ಇಟ್ಟು ಕೃತಾರ್ಥಳಾಗುತ್ತೇನೆ. ಈ ಜಗತ್ತಿನಲ್ಲಿ ನನ್ನದೆಂದು ಇರುವಂಥ ಯಾವತ್ತನ್ನು ನಿಮಗೆ ಅರ್ಪಿಸಿ ಬಿಟ್ಟಿರುತ್ತೇನೆ ಪ್ರಾಣೇಶ್ವರಾ! ನಿಮಗೆ ಅರ್ಪಿಸಲಿಕ್ಕೆ ಈ ಹತಭಾಗ್ಯಳ ಹತ್ತರ ಇನ್ನೇನು ಉಳಿದಿರುವದು?" ಎಂದು ನುಡಿದಳು. ಅವಳಿಗೆ ಮುಂದೆ ಮಾತಾಡಲಿಕ್ಕೆ ಆಗಲೊಲ್ಲದು. ಅವಳ ಶುಷ್ಕವಾಗಿದ್ದ ಗಲ್ಲದ ಮೇಲಿಂದ ಅಶ್ರುಗಳು ಬಿಟ್ಟೂಬಿಡದೆ ಹರಿಯಹತ್ತಿದವು ಆಗ ಅವಳು ಮೆಲ್ಲನೆ ಕೆಳಗೆ ಕುಳಿತುಕೊಂಡಳು.

ಆದರೆ ಇತ್ತಲಾ ಸುಶೀಲೆಯ ಒಂದೊಂದು ಶಬ್ದವನ್ನು ಕೇಳಿದ ಕೂಡಲೆ ಮಾನಸಿಂಹನ ಎದೆಗೆ ಬಾಣವು ನೆಟ್ಟಂತೆ ಆಯಿತು. ಅವನು ಪ್ರಖರವಾದ ಅನುತಾಪಜ್ವಾಲೆಯಿಂದ ಕರಿದು ಕಮರಿದನು. ತಾನು ನಿರಪರಾಧಿಯಾದ ಸಾಧ್ವಿಯ ಮೇಲೆ ವ್ಯರ್ಥವಾಗಿ ಸಂಶಯತೆಗೆದು ಕೊಂಡು ಅವಳನ್ನು ತ್ಯಾಗಮಾಡಿದ ಸಂಗತಿಯು ಘೋರವಾದ ಪಾಪವಾ ಯಿತೆಂತಲೂ ತನ್ನ ಪಾಪವನ್ನು ಈ ಲೋಕದಲ್ಲಿ ಅಥವಾ ಪರಲೋಕದಲ್ಲಿ ಯಾರೂ ಕ್ಷಮಿಸಲಾರರೆಂತಲೂ ಅವನಿಗೆ ತೋಚಿದ್ದರಿಂದ ಅವನೂ ವ್ಯಾಕು ಲನಾಗಿ ಮೆಲ್ಲನೆ ಭೂಮಿಯ ಮೇಲೆ ಕುಳಿತನು. ಆದರೆ ಆ ಸಾಧ್ವಿಯ ಅಂಗಸ್ಪರ್ಶ ಮಾಡುವ ಧೈರ್ಯವು ಅವನಿಗಾಗಲಿಲ್ಲ ಆಗ ಅವನು ದೀನ

ಸ್ವರದಿಂದ "ಸುಶೀಲೇ, ನನ್ನಿಂದ ಘೋರ ಅಪರಾಧವು ಸಂಭವಿಸಿತು. ಅದನ್ನು ದಯಮಾಡಿ ಕ್ಷಮಿಸು. ಈ ದಾಸನ ಕಡೆಗೆ ಕೃಪಾದೃಷ್ಟಿಯಿಂದ ನೋಡಿ, ಹಿಂದೆ ಆದದ್ದನ್ನು ಮರೆತು ಬಿಟ್ಟು, ನನ್ನ ಸಂಗಡ ಅಂಬರ ರಾಜಧಾನಿಗೆ ನಡೆ. ನಾನು ಪಾಪಿಷ್ಠನಲ್ಲದಿದ್ದರೆ ನಿನ್ನಂಥ ಸಾಧ್ವಿಯ ಛಲವು ನನ್ನ ಕೈಯಿಂದ ಹೇಗೆ ಆಗುತ್ತಿತ್ತು? ಇರಲಿ. ಆದದ್ದನ್ನು ಹೇಗಾದರೂ ಹೊಟ್ಟೆಯಲ್ಲಿ ಹಾಕಿಕೊಂಡು ನನಗೆ ಕ್ಷಮಾದಾನವನ್ನು ಮಾಡು" ಎಂದು ಸುಶೀಲೆಗೆ ಬೇಡಿಕೊಂಡನು.

ಆಗ ಸುಶೀಲೆಯು ಸಹ ದುಃಖದಿಂದ ಬಿಕ್ಕುತ್ತ "ಪ್ರಿಯಕರಾ! ಈ ಪ್ರಕಾರ ನೀವು ದೈನ್ಯೋಕ್ತಿಯಿಂದ ನನಗೆ ಹೇಳಿಕೊಳ್ಳಬಾರದು. ನೀವು ಏನೂ ಅಪರಾಧವನ್ನು ಮಾಡಿಲ್ಲ. ನಾನು ನಿಮ್ಮ ಚರಣದ ದಾಸಿಯು. ಪ್ರಭುಗಳಿಂದ ದಾಸಿಗೆ ಅಪರಾಧವು ವರ್ತಿಸುವ ಸಂಭವವುಂಟೇ? ಪ್ರಾಣನಾಥಾ! ನೀವು ನೂರಾರು ಜನರ ಮುಂದೆ ನನಗೆ ಲತ್ತಾಪ್ರಹಾರ ಮಾಡಿ ನನ್ನನ್ನು ದೂರ ಅಟ್ಟಿಕೊಟ್ಟದ್ದರೂ ನನಗೆ ಯತ್ಕಿಂಚಿತ್ತಾದರೂ ದುಃಖವೆನಿಸುತ್ತಿದ್ದಿಲ್ಲ. ಅದರಿಂದ ನಿಮ್ಮ ಚರಣಕಮಲಗಳಿಗೆ ಆಗುತ್ತಿದ್ದ ನೋವು ಮಾತ್ರ ನನಗೆ ದುಃಖಕೊಡುತ್ತಿತ್ತು ನನ್ನ ಮೇಲೆ ಕಲಂಕದ ದೋಷವು ಬಂದದ್ದು ನನ್ನ ಹಣೇಬರಹದ ದೋಷವೇ ಸರಿ. ನಿಮ್ಮ ಕಡೆಗೆ ಅದರ ದೋಷವು ಯತ್ಕಿಂಚಿತ್ತಾದರೂ ಇಲ್ಲ. ನೀವು ನನ್ನ ಮೇಲೆ ಎಷ್ಟು ಪರಿಯಿಂದ ಪ್ರೇಮ ಮಾಡುತ್ತಿದ್ದಿರಿ? ನಾನು ಅಡವಿಯಲ್ಲಿ ಸಂಚರಿಸುವ ದರಿದ್ರಳು. ನನ್ನಂಥ ದರಿದ್ರಿಗೆ ನೀವು ಪಟ್ಟದ ರಾಣಿಯನ್ನು ಮಾಡಿದ್ದಿರಿ. ಆ ಪದತ್ವವನ್ನು ಭೋಗಿಸುವ ದೈವವು ನನಗಿದ್ದಿಲ್ಲ. ಈ ಹತಭಾಗ್ಯಳಿಗೆ ಅದನ್ನು ರಕ್ಷಣಮಾಡಿಕೊಳ್ಳುವ ಶಕ್ತಿಯು ಸಾಲಲಿಲ್ಲ. ಇದೆಲ್ಲ ನನ್ನ ದೈವದ ಅಪರಾಧವಿರುತ್ತದೆ. ನಿಮ್ಮ ಕಡೆಗೆ ಅದರದೇನೂ ಅಪರಾಧವಿಲ್ಲ. ಇನ್ನು ಮೇಲೆ ನೀವು ನನ್ನನ್ನು ದಯಮಾಡಿ ನಿಮ್ಮ ಸಂಗಡ ಕರೆದುಕೊಂಡು ಹೋಗಬೇಡಿರಿ. ನಾನು ಈ ನನ್ನ ಪಾಪಿಷ್ಠ ಮೋರೆಯನ್ನು ಜನರ ಮುಂದೆ ಹೇಗೆ ತೋರಿಸಲಿ? ಅಯ್ಯೋ! ಕಲಂಕವು— ಕಲಂಕವು— ನಾಲ್ಕೂ ಕಡೆಗೆ ಕಲಂಕವೇ ಕಾಣಿಸಹತ್ತಿರುತ್ತದೆ. ಈ ದುರ್ಬಲ ಹೃದಯಳಿಂದ

ಈ ಭಯಂಕರ ದುಃಖವನ್ನು ಸಹನ ಮಾಡುವದು ಇನ್ನುಮುಂದೆ ಆಗದು. ನನ್ನನ್ನು ನೀವು ದಯಮಾಡಿ ರಾಜಧಾನಿಗೆ ಕರೆದೊಯ್ಯಬೇಡಿರಿ. ನಿಮಗೆ ಕಾಲು ಬಿದ್ದು ಹೇಳುತ್ತೇನೆ" ಎಂದು ಹೇಳಿದಳು.

ಸುಶೀಲೆಯ ಮನೋವೃತ್ತಿಯು ದುಃಖಮಯವಾದ್ದರಿಂದ ಅವಳು ಚಳಿ ಬಂದವರಂತೆ ಗದಗದ ನಡುಗಹತ್ತಿದಳು; ಅವಳ ಮಸ್ತಕವು ಭ್ರಮಣವಾಗಹತ್ತಿತು; ಅವಳಿಗೆ ತನ್ನ ಗುಹೆಯು ತನ್ನ ಸುತ್ತಲು ತಿರುಗುವಂತೆ ಭಾಸವಾಯಿತು! ಈ ಪ್ರಕಾರ ಆಕೆಯು ಅವಸ್ಥೆಯಾದ್ದರಿಂದ ಅವಳು ಒಮ್ಮೆಲೆ ಭೂಮಿಯ ಮೇಲೆ ಮೂರ್ಛಿತಳಾಗಿ ಬಿದ್ದುಕೊಂಡಳು. ಮಾನಸಿಂಹನು ಸುಶೀಲೆಯ ಬಳಿಯಲ್ಲಿ ಎಷ್ಟೋ ಹೊತ್ತಿನ ತನಕ ಇದ್ದಾಗ್ಯೂ ಅವಳ ಅಂಗಸ್ಪರ್ಶವನ್ನು ಮಾಡಿದ್ದಿಲ್ಲ. ಆದರೆ ಈಗ ಮಾತ್ರ ಮಾನಸಿಂಹನು ಭೂಮಿಯ ಮೇಲೆ ಬಿದ್ದುಕೊಂಡಿದ್ದ ತನ್ನ ಪತ್ನಿಯ ಸುಂದರ-ಸುಕುಮಾರ ದೇಹಲತೆಯನ್ನು ತನ್ನ ತೊಡೆಯ ಮೇಲೆ ಇರಿಸಿ ಪ್ರೇಮಭರದಿಂದ ಒಂದು ಸಾರೆ ಅವಳ ಚುಂಬನವನ್ನು ತೆಗೆದುಕೊಂಡು ಅವಳನ್ನು ಸಮಾಧಾನಪಡಿಸುವದಕ್ಕಾಗಿ ಮೃದುಹಸ್ತದಿಂದ ಅವಳ ಮೈಮೇಲೆ ಕೈಯಾಡಿಸಿದನು. ಆ ಸ್ಪರ್ಶದಿಂದ ಅವಳ ದುಃಖವು ಮತ್ತಿಷ್ಟು ಉತ್ತೇಜನವನ್ನು ಹೊಂದಲಾಗಿ ಅವಳು ಮುಂಚಿನಕಿಂತ ಹೆಚ್ಚು ನಡುಗಹತ್ತಿದಳು. ಆಗ ಮಾನಸಿಂಹನು ಕಣ್ಣೊಳಗೆ ನೀರು ತಂದು ಅಶ್ರುಪ್ರವಾಹದಿಂದ ಮೈಯೆಲ್ಲ ತೊಯ್ದು ಹೋದ ಸುಶೀಲೆಯ ಮ್ಲಾನ ಮುಖದ ಕಡೆಗೆ ನೋಡಿ ದುಃಖಾತಿಶಯದಿಂದ "ಸುಶೀಲೇ! ನನ್ನನ್ನು ತ್ಯಾಗ ಮಾಡಬೇಡ. ನನ್ನ ಮಾತನ್ನು ಅಲಕ್ಷಿಸಬೇಡ. ದಯಮಾಡಿ ನನ್ನ ಸಂಗಡ ರಾಜಧಾನಿಗೆ ಹೊರಡು. ಚಾಂಡಾಲನಾದ ನಾನು ನಿನ್ನ ನಿಷ್ಕಲಂಕ ಚರಿತ್ರಕ್ಕೆ ಮಿಥ್ಯಾರೋಪದ ಕಲಂಕ ಹಚ್ಚಿರುವದನ್ನು ನನ್ನ ಕೈಯಿಂದಲೇ ತೊಳೆದು ಬಿಟ್ಟು ನಿನ್ನ ನಿಷ್ಕಲಂಕತ್ವವನ್ನು ಜಗತ್ತಿಗೆಲ್ಲ ಪ್ರಸಿದ್ಧಮಾಡುತ್ತೇನೆ. ಅಂತಃಪುರದೊಳಗಿನ ಯಾವತ್ತು ರಾಣಿಯರನ್ನು ನಿನ್ನ ದಾಸಿಯರಾಗಿ ಮಾಡುತ್ತೇನೆ. ದರಬಾರವನ್ನು ಕೂಡಿಸಿ ಎಲ್ಲ ಪ್ರಜಾಜನರನ್ನು ಕರೆಯಿಸಿ, ಅವರ ಸಮಕ್ಷ ನಿನ್ನನ್ನು ಪಟ್ಟರಾಣಿಯಾಗಿ ಮಾಡುತ್ತೇನೆ. ನನ್ನ ಅಪರಾಧವನ್ನು ಕ್ಷಮಿಸು.

ಅಂಬರದ ಪ್ರತಾಪಶಾಲಿಯಾದ ಅರಸನೂ ದಿಲ್ಲೀ ಬಾದಶಹನ ಸೇನಾಪತಿಯೂ ನಿನ್ನ ಅಪರಾಧಿಯಾದ ಪತಿಯೂ ಆದ ಮಾನಸಿಂಹನು ಈ ಹೊತ್ತು ನಿನ್ನ ಹತ್ತರ ಕ್ಷಮಾರೂಪವಾದ ಭಿಕ್ಷೆಯನ್ನು ಬೇಡುತ್ತಾನೆ. ಅದನ್ನು ನೀನು ದಯಮಾಡಿ ಅನುಗ್ರಹಿಸಿ ರಾಜಧಾನಿಗೆ ಹೊರಡು" ಎಂದು ಪರಿಪರಿಯಿಂದ ಹೇಳಿದನು.

ಮಾನಸಿಂಹನ ತೇಜಸ್ವಿಯಾದ ನೇತ್ರಗಳಿಂದ ಅಶ್ರುಗಳು ತೆರಪಿಲ್ಲದೆ ಸುರಿದವು. ಸುಶೀಲೆಯು ಮಾನಸಿಂಹನ ಅಶ್ರುಗಳು ಸುರಿಯುವದನ್ನು ನೋಡಿ ಒಮ್ಮೆಲೆ ನಗಲಿಕ್ಕೆ ಹತ್ತಿ "ನೀವು ಇಂಥ ದೊಡ್ಡ ವೀರರಿದ್ದು ನಿಮ್ಮ ಕಣ್ಣೊಳಗೆ ಸಾಮಾನ್ಯ ಸ್ತ್ರೀಯರಂತೆ ಕಣ್ಣೀರು ಬರಬಾರದು. ನೀವು ದಿಲ್ಲೀಶ್ವರನಾದ ಅಕಬರ ಬಾದಶಹನ ಮುಖ್ಯ ಸೇನಾಪತಿಯಾಗಿರುವದರಿಂದ ಈ ಪ್ರಕಾರ ಕಣ್ಣೀರು ಸುರಿಸುವದು ಶೋಭಿಸುವದಿಲ್ಲ. ಮಹಾರಾಜರೇ! ನಿಮ್ಮ ಪ್ರೇಮವು ಇಷ್ಟು ದಿವಸಗಳ ಪರಿಯಂತರ ಎಲ್ಲಿ ಅಡಗಿತ್ತು? ನನ್ನನ್ನು ರಾಜಧಾನಿಗೆ ಕರೆದೊಯ್ಯುವದು ನಿಮ್ಮ ಮನಸ್ಸಿನಲ್ಲಿದ್ದರೆ ನನ್ನನ್ನು ಪಟ್ಟರಾಣಿಯ ಸಡಗರದಿಂದ ರಾಜಧಾನಿಗೆ ಕರೆದುಕೊಂಡು ಹೋಗಿರಿ. ಮೇಣೆ, ಪಲ್ಲಕ್ಕಿ, ಆನೆ, ಕುದುರೆ, ವಾದ್ಯ, ಸೈನ್ಯ ಇವುಗಳನ್ನು ತೆಗೆದುಕೊಂಡು ಬರ್ರಿ. ನಾನು ನಿಮ್ಮ ಸಂಗಡ ನಿಮ್ಮ ಪಟ್ಟರಾಣಿಯ ವೈಭವದಿಂದ ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು ಊದಿಸುತ್ತ, ಬಾರಿಸುತ್ತ ಬರುವೆನು! ಪಲ್ಲಕ್ಕಿಯನ್ನೂ, ಆನೆಯನ್ನೂ, ತೆಗೆದುಕೊಂಡು ಬರ್ರಿ! ಮಹಾರಾಜರೇ! ಈಗ ಯಾಕೆ ಮಾತಾಡುವುದಿಲ್ಲ?" ಎಂದು ಕೇಳಿ ಮತ್ತೆ ನಗಲಾರಂಭಿಸಿದಳು.

## ಭಾಗ ೧೭.

## ಮಾನಸಿಂಹನ ಪಶ್ಚಾತ್ತಾಪವು.

ಸುಶೀಲೆಯು ಉನ್ಮಾದವ್ಯಾಧಿಯಿಂದ ಪೀಡಿತಳಾದ ಸಂಗತಿಯು ಮಾನಸಿಂಹನಿಗೆ ಫೈಜಿಯ ಕಡೆಯಿಂದ ಈ ಮುಂಚಿತವಾಗಿಯೇ ಗೊತ್ತಾಗಿತ್ತು. ಮೊದಲಿಗೆ ಸುಶೀಲೆಯು ಮಾನಸಿಂಹನನ್ನು ನೋಡಿದ ಕೂಡಲೆ ಸ್ವಲ್ಪ

ಎಚ್ಚರಿಕೆಯ ಮೇಲೆ ಬಂದಿದ್ದಳು. ಆದರೆ ತೀವ್ರವಾಗಿ ಅವಳ ಮನೋವೃತ್ತಿಯು ಬದಲಾಗಿ ಪುನಃ ಅವಳ ಉನ್ಮಾದವ್ಯಾಧಿಯು ಹೆಚ್ಚಾಯಿತು. ಆದ್ದರಿಂದ ಸ್ವಾಭಾವಿಕವಾಗಿ ಅವಳ ಕಡೆಯ ಭಾಷಣವು ವಿಭ್ರಮದ ಶಿಖರಕ್ಕೆ ಹೋಯಿತು. ಅವಳ ಭಾಷಣವನ್ನು ಕೇಳಿದಾಗಿನಿಂದ ಮಾನಸಿಂಹನು ಅಂಜಿಕೆಯಿಂದಲೂ ದುಃಖದಿಂದಲೂ ಜೋರನೆ ಬೆವತನು. ಅವನ ಎದೆಯು ಹಾರಲಿಕ್ಕೆ ಹತ್ತಿತು. ಅವನ ತೊಡೆಯ ಮೇಲೆ ಸುಶೀಲೆಯು ನಿಶ್ಚೇಷ್ಟಿತಳಾಗಿಯೂ, ನಿಃಶಬ್ದಳಾಗಿಯೂ ಬಿದ್ದುಕೊಂಡಿದ್ದಳು. ಆಗ ಸುಶೀಲೆಯು ದುಷ್ಯಂತರಾಜನ ತೊಡೆಯ ಮೇಲೆ ವಿರಾಜಮಾನಳಾದ ಶಕುಂತಲೆಯೋ, ಅಥವಾ ಲಂಕಾವಿಜಯವನ್ನು ಮಾಡಿದ ಶ್ರೀರಾಮಚಂದ್ರನ ತೊಡೆಯ ಮೇಲೆ ವಿರಾಜಮಾನಳಾದ ಅಶೋಕವನದಲ್ಲಿಯ ಸೀತಾದೇವಿಯೋ ಎಂಬುವಂತೆ ಕಾಣಿಸಿದಳು! ಇದನ್ನು ನೋಡುವವರಿಗೆ ಕ್ರೂರತನದ ತೊಡೆಯ ಮೇಲೆ ಕರುಣಾರಸವು ಶಯನ ಮಾಡಿರುವದೋ ಅಥವಾ ಕ್ರೋಧದ ತೊಡೆಯ ಮೇಲೆ ಪ್ರೀತಿಯು ಶಯನ ಮಾಡಿರುವದೋ ಎಂದು ಒಂದೊಂದು ಸಾರೆ ಭಾಸವಾಗುವಂತೆ ಇತ್ತು. ಆದರೆ ಇಷ್ಟರಲ್ಲಿ ಮಾನಸಿಂಹನು ದುಃಖದಿಂದ ಸಿರ ಉಬ್ಬಿಸಿ "ಸುಶೀಲೇ! ಸುಶೀಲೇ!" ಎಂದು ಒದರಿದನು ಆದರೆ ಅದಕ್ಕೆ ಸುಶೀಲೆಯು ಏನೂ ಉತ್ತರ ಕೊಡಲಿಲ್ಲ. ಆಕೆಯು ಮೂರ್ಛಿತಳಾಗಿ ಸುಮ್ಮನೆ ಬಿದ್ದಿದ್ದಳು. ರಾಜಾ ಮಾನಸಿಂಹನು ಸುಶೀಲೆಯ ಆ ಭಯಪ್ರದ ಸ್ಥಿತಿಯನ್ನು ನೋಡಿ ಅಂಜಿ "ನೀರು—ನೀರು—ಯಾರಾದರೂ ಬೇಗನೆ ನೀರನ್ನು ತೆಗೆದುಕೊಂಡು ಬರ್ರಿ." ಎಂದು ಗಾಬರಿಗೆಟ್ಟು ಕೂಗಿದನು. ಅವನ ಕೂಗು ಕೇಳಿ ಯಾರೂ ಬರಲಿಲ್ಲ. ಆದರೆ ಆ ಗುಹೆಯಲ್ಲಿ ಅವನು ಮಾತಾಡಿದ ಶಬ್ದಗಳ ಪ್ರತಿಧ್ವನಿಯು ಮಾತ್ರ ಕೇಳಿಸಿತು. ಈ ಪ್ರತಿಧ್ವನಿಯು ಶಾಂತವಾಗುವಷ್ಟರಲ್ಲಿ ಒಮ್ಮಿಂದೊಮ್ಮೆ ಸನ್ಯಾಸಿಯು ಅಲ್ಲಿಗೆ ಬಂದನು ಅವನು ಸುಶೀಲೆಯಗೋಸ್ಕರ ಒಂದು ಔಷಧದ ವನಸ್ಪತಿಯನ್ನು ತರುವದಕ್ಕಾಗಿ ಅಲ್ಲಿಯೇ ಸಮೀಪವಿದ್ದ ಅಡವಿಯೊಳಗೆ ಹೋಗಿದ್ದನು. ಅವನು ಅಲ್ಲಿ ಬಂದು ನೋಡುವಷ್ಟರಲ್ಲಿ ಮಾನಸಿಂಹನು ಮೂರ್ಛಿತಳಾಗಿದ್ದ

ಸುಶೀಲೆಯುನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡು ಕುಳಿತಿದ್ದನು. ಮಾನಸಿಂಹನನ್ನು ನೋಡಿದ ಕೂಡಲೆ ಆ ಸನ್ಯಾಸಿಯು ರುಧಿರನೇತ್ರ ಗಳನ್ನು ಮಾಡಿ "ಪಾಪಿಷ್ಠನೇ! ನಿನ್ನ ಘೋರ ಕೃತ್ಯದ ಈ ಪರಿಣಾಮವನ್ನು ಕಣ್ಣು ತೆರೆದುನೋಡು. ನಿನ್ನನ್ನು ಇಲ್ಲಿ ಯಾರು ಕರೆದುಕೊಂಡು ಬಂದರು?" ಎಂದು ನುಡಿದನು

ವೀರನಾದ ಮಾನಸಿಂಹನು ಅಧೋವದನವನ್ನು ಮಾಡಿ ಈ ತಿರ ಸ್ಕಾರವನ್ನು ಸಹನ ಮಾಡಿಕೊಂಡು ಸುಮ್ಮನಾದನು. ಸನ್ಯಾಸಿಯ ಕಡೆಗೆ ಮೋರೆ ಎತ್ತಿ ನೋಡುವ ಧೈರ್ಯವು ಮಾನಸಿಂಹನಿಗೆ ಬಹಳ ಹೊತ್ತಿನ ತನಕ ಆಗಲಿಲ್ಲ. ಅವನು ಆ ಸನ್ಯಾಸಿಯ ಮಹಾ ಅಪರಾಧವನ್ನು ಮಾಡಿದ್ದ ಕಾರಣ ಅವನ ಶೂರತ್ವ, ರಾಜತ್ವ, ಶ್ರೇಷ್ಠತ್ವ ಮತ್ತು ಮಹತ್ವ ಗಳೆಲ್ಲ ಅಡಗಿಹೋಗಿದವು. ಆದ್ದರಿಂದ ಮಾನಸಿಂಹನು ಖಿನ್ನವದನ ನಾಗಿ, ಲಜ್ಜಿತಭಾವದಿಂದ "ಭಗವನ್! ನಾನು ಮಾಡಿದ ಪಾಪಕ್ಕೋಸ್ಕರ ಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳಲಿಕ್ಕೆ ಇಲ್ಲಿಗೆ ಬಂದಿರುತ್ತೇನೆ. ಮೊದ ಲಿಗೆ ಸ್ವಲ್ಪ ನೀರು ತೆಗೆದುಕೊಂಡು ಬರ್ರಿ. ಸುಶೀಲೆಯು ಮೂರ್ಛಿತ ಳಾಗಿದ್ದಾಳೆ" ಎಂದು ಹೇಳಿದನು.

ಆಗ ಸನ್ಯಾಸಿಯು ಹೋಗಿ ತ್ವರೆಯಿಂದ ನೀರು ತಂದನು. ಹಾಗೂ ತಾನು ತಂದಿದ್ದ ವನಸ್ಪತಿಯನ್ನು ತನ್ನ ಕೈಯಲ್ಲಿ ಹಿಂಡಿ ಅದರ ಸ್ವಲ್ಪ ರಸ ವನ್ನು ಸುಶೀಲೆಯ ಬಾಯಿಯಲ್ಲಿ ಹಾಕಿದನು. ಆ ಮೇಲೆ ಆಕಯು ಮಾನಸಿಂಹನ ಕಡೆಗೆ ತಿರುಗಿ ನೋಡಿ "ಮಹಾನುಭಾವರೇ, ನೀವು ಮಹಾ ಪಾತಕಿಗಳು. ನೀವು ಅಂಬರದ ದೊಡ್ಡ ರಾಜರೂ ಸಾರ್ವಭೌಮ ದಿಲ್ಲೀ ಶ್ವರನ ಪ್ರತಾಪಶಾಲಿಯಾದ ಸೇನಾಪತಿಗಳೂ ಇರುತ್ತೀರಿ. ನೀವು ನಿಮ್ಮ ಕಟಾಕ್ಷಮಾತ್ರದಿಂದ ಎಷ್ಟೋ ಹೊಸ ರಾಜ್ಯಗಳನ್ನು ನಿರ್ಮಾಣ ಮಾಡಿರು ತ್ತೀರಿ. ಹಾಗೂ ಎಷ್ಟೋ ರಾಜ್ಯಗಳನ್ನು ಲಯಮಾಡಿರುತ್ತೀರಿ. ಹೀಗಿದ್ದು ನಿಮ್ಮಂಥ ಸತ್ತಾಧೀಶರಿಗೆ ನನ್ನ ಬಡವೆಯ ಒಂದು ಸಾಮಾನ್ಯ ನಡತೆಯನ್ನು ಕುರಿತು ನ್ಯಾಯಮಾಡಲಿಕ್ಕೆ ಬರಲಿಲ್ಲ. ನೀವು ಅನ್ಯಾಯದಿಂದ ನನ್ನಂಥ ಸಾಧ್ವಿಯಾದ ಧರ್ಮಪತ್ನಿಯನ್ನು ತ್ಯಾಗ ಮಾಡಿದಿರಿ!" ಎಂದು ನುಡಿದಳು

ಅದಕ್ಕೆ ಮಾನಸಿಂಹನು ನಿರುತ್ತರನಾದನು ಸುಶೀಲೆಯ ಮಾತನ್ನು ಕೇಳಿ ಅವನು ಬಹಳ ಲಜ್ಜಿತನಾಗಿ ಸನ್ಯಾಸಿಗೆ ವಿನಯಭಾವದಿಂದ "ಸ್ವಾಮಿನ್! ಈ ಪಾಪಕ್ಕೆ ಏನು ಪ್ರಾಯಶ್ಚಿತ್ತವಿರುತ್ತದೆಂಬುವದನ್ನು ಹೇಳಿರಿ. ಆ ಪ್ರಾಯಶ್ಚಿತ್ತವು ಎಷ್ಟು ಉಗ್ರವಿದ್ದರೂ ನಾನು ಅದನ್ನು ಆನಂದದಿಂದ ಭೋಗಿಸಿ ಸಾಧ್ವೀಮಣಿಗೆ ವ್ಯರ್ಥವಾಗಿ ಹತ್ತಿದ ಕಲಂಕ ವನ್ನು ತೊಳೆದು ಬಿಡುವೆನು" ಎಂದು ಹೇಳಿದನು.

ಆಗ ಸನ್ಯಾಸಿಯು "ಪಾಪವು ಎರಡು ಪ್ರಕಾರದ್ದು ಇರುವದು. ಒಂದು ತಿಳಿದೂ ತಿಳಿದೂ ಮಾಡಿದ್ದು. ಇನ್ನೊಂದು ತಿಳಿಯದೆ ಅಜ್ಞಾನ ದಿಂದ ಮಾಡಿದ್ದು. ಮೊದಲನೇದ್ದಕ್ಕೆ ಅಂದರೆ ತಿಳಿದೂ ತಿಳಿದೂ ಮಾಡಿ ದ್ದಕ್ಕೆ ಪ್ರಾಯಶ್ಚಿತ್ತವಿಲ್ಲ. ಎರಡನೇದ್ದಕ್ಕೆ ಅಂದರೆ ತಿಳಿಯದೆ ಅಜ್ಞಾನ ದಿಂದ ಮಾಡಿದ್ದಕ್ಕೆ ಶಾಸ್ತ್ರಕಾರರು ಪ್ರಾಯಶ್ಚಿತ್ತವನ್ನು ವಿಧಿಸಿರುತ್ತಾರೆ. ನಿನ್ನ ಕೈಯಿಂದ ಎರಡನೇ ಪ್ರಕಾರದ ಪಾಪವು ಘಟಿಸಿರುತ್ತದೆ. ಅದಕ್ಕಾಗಿ ನಿನಗೆ ಸಾಂಪ್ರತಕ್ಕೆ ಅತ್ಯಂತ ಪಶ್ಚಾತ್ತಾಪವುಂಟಾಗಿರುವದು. ಈ ಪಶ್ಚಾ ತ್ತಾಪವೇ ನಿನಗೆ ಪ್ರಾಯಶ್ಚಿತ್ತವು. ಇನ್ನು ಮೇಲೆ ನೀನು ನಿನ್ನ ಧರ್ಮ ಪತ್ನಿಯಾದ ಸುಶೀಲೆಯನ್ನು ಪುನಃ ಸ್ವೀಕರಿಸು. ಶ್ರೀರಾಮಚಂದ್ರನು ಲೋಕಾಪವಾದದಗೋಸ್ಕರ ನಿಷ್ಕಲಂಕ ಸೀತಾದೇವಿಯನ್ನು ವನದಲ್ಲಿ ತ್ಯಾಗಮಾಡಿ ಮುಂದೆ ಪಶ್ಚಾತ್ತಾಪಪಟ್ಟು ರಾಜಸಭೆಯಲ್ಲಿ ಎಲ್ಲರ ಸಮಕ್ಷ ಆಕೆಯನ್ನು ಪ್ರತ್ಯಕ್ಷವಾಗಿ ಸ್ವೀಕರಿಸಿದಂತೆ ನೀನೂ ಮಾಡು" ಎಂದು ಅವ ನಿಗೆ ಉಪದೇಶ ಹೇಳಿದನು. ಹಿಂದಕ್ಕೊಮ್ಮೆ ಮಹೇಶನು ತನ್ನ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಕೇಳಿದಾಗ ಸನ್ಯಾಸಿಯು "ಪಶ್ಚಾತ್ತಾಪವೇ ಪ್ರಾಯಶ್ಚಿ ತ್ತವು" ಎಂದು ಹೇಳಿದ್ದನು ಅದನ್ನೇ ಅವನು ಈಗ ಮಾನಸಿಂಹನಿಗೆ ಹೇಳಿದನು. ಸನ್ಯಾಸಿಯು ಮಾನಸಿಂಹನ ಮನಸ್ಸಿನಲ್ಲಿದ್ದಂತೆಯೇ ಹೇಳಿದ್ದ ರಿಂದ ಮಾನಸಿಂಹನಿಗೆ ಬಹಳ ಸಂತೋಷವಾಯಿತು.

ಕೂಡಲೆ ಮಾನಸಿಂಹನು "ನಿಮ್ಮ ಆಜ್ಞೆಯು ನನಗೆ ಶಿರಸಾವಂದ್ಯ ವದೆ ಆದರೆ ಸುಶೀಲೆಯು ಉನ್ಮಾದಳೂ, ಭ್ರಮಿಷ್ಟಳೂ, ಜ್ಞಾನಶೂನ್ಯಳೂ ಆಗಿರುವಳು. ಅವಳು ನನ್ನನ್ನು ಸ್ವೀಕರಿಸುವಳೇ?" ಎಂದು ಕೇಳಿದನು.

ಆದಕ್ಕೆ ಸನ್ಯಾಸಿಯು ಸ್ವಲ್ಪ ಹೊತ್ತು ಯೋಚಿಸಿ « ಆ ಮಾತು ನನ್ನ ಕಡೆಗೆ ಒಪ್ಪಿತು. ನಾನು ಅವಳನ್ನು ನಿನಗೆ ಮುಂಚೆ ಅರ್ಪಣ ಮಾಡಿದಂತೆ ಈಗ ಪುನಃ ಅವಳನ್ನು ನಿನಗೆ ಅರ್ಪಣಮಾಡುತ್ತೇನೆ. ನಾಡದಿನ ದಿವಸವು ಶುಭ ದಿವಸವಿರುತ್ತದೆ. ಅಂಬರವಾದರೂ ಇಲ್ಲಿಂದ ದೂರವಿಲ್ಲ. ನೀನು ಈಗಿಂದೀಗಲೇ ಹೋಗಿ ನಿನ್ನ ವಾಹನಾದಿಕಗಳನ್ನು ತೆಗೆದುಕೊಂಡು ಬಾ. ನನ್ನ ಪ್ರಿಯ ಕನ್ನಿಕೆಯಾದ ಸುಶೀಲೆಯು ಪಟ್ಟರಾಣಿಯಾಗಿ ನಗರಪ್ರವೇಶವನ್ನು ಮಾಡಲಿ. ನಿನ್ನ ಯಾವತ್ತು ಸೈನ್ಯವೂ ಪ್ರಜೆಗಳೂ ಆನೆಕುದುರೆಗಳೂ ಅವಳನ್ನು ಇದಿರುಗೊಳ್ಳುವದಕ್ಕೆ ಮುಂದೆ ಬರಲಿ. ಸುಶೀಲೆಗೆ ನಾನು ಈಗ ಕೊಟ್ಟ ಔಷಧದಿಂದ ಅವಳು ಬೇಗನೆ ಗುಣಹೊಂದುವಳು. ಹೋಗು. ನಿನ್ನ ಸಿಸ್ಥತೆಯನ್ನು ಮಾಡು ವದಕ್ಕೆ ಹೊರಟುಹೋಗು » ಎಂದು ಹೇಳಿದನು.

ಆಗ ಮಾನಸಿಂಹನು ಸನ್ಯಾಸಿಗೆ ವಂದನ ಮಾಡಿ ತತ್‌ಕ್ಷಣವೇ ಹೊರಟು ಹೋದನು. ಅವನು ಗುಹೆಯ ಹೊರಗೆ ಹೋಗಿ ತ್ವರಿತ ಗತಿ ಯಿಂದ ಮಾರ್ಗ ಕ್ರಮಣಮಾಡಿದನು. ಅವನು ಸ್ವಲ್ಪ ಮುಂದೆ ಹೋಗು ವಷ್ಟರಲ್ಲಿ ಫೈಜಿಯು ಸಚಿಂತ ಮುದ್ರೆಯಿಂದ ಒಂದು ಗಿಡದ ಕೆಳಗೆ ನಿಂತ ದ್ದನ್ನು ಕಂಡನು. ಆಗ ಮಾನಸಿಂಹನ ಚಿತ್ತವು ಸ್ವಸ್ಥವಿದ್ದಿಲ್ಲ. ಅವನು ಫೈಜಿಯುಗೂಡ ಏನೂ ಭಾಷಣ ಮಾಡಲಿಲ್ಲ. ಉಭಯತರು ಒಂದು ಸಾರೆ ದಯಾರ್ದ್ರ ದೃಷ್ಟಿಯಿಂದ ಒಬ್ಬರನ್ನೊಬ್ಬರು ನೋಡಿದರು. ಮಾನ ಸಿಂಹನು ವೇಗದಿಂದ ಮುಂದೆ ನಡೆದನು. ಫೈಜಿಯು ತಾನೂ ವೇಗ ದಿಂದ ಅವನ ಬೆನ್ನು ಹತ್ತಿದನು. ಉಭಯತರೂ ನಿಃಶಬ್ದವಾಗಿ ದಾರೀ ನಡೆದರು. ಈ ಪ್ರಕಾರ ಅವರಿಬ್ಬರೂ ಒಂದು ಶಬ್ದ ಸಹ ಉಚ್ಚರಿಸದ ಕೆಲವು ದೂರ ಹೋದ ಬಳಿಕ ಒಂದು ಬೈಲು ಸ್ಥಳವು ಬಂತು. ಅಲ್ಲಿ ಫೈಜಿಯು ಮಾನಸಿಂಹನನ್ನು ಅಡ್ಡಕಟ್ಟಿ ನಿಂತನು. ಫೈಜಿಯು ಈ ಪ್ರಕಾರ ಅಡ್ಡಕಟ್ಟಿ ನಿಂತುಕೊಂಡ ಉದ್ದೇಶವು ಮಾನಸಿಂಹನ ಲಕ್ಷದಲ್ಲಿ ಬರಲಿಲ್ಲ. ಆಗ ಮಾನಸಿಂಹನು « ಮಿತ್ರಾ!—ಒಮ್ಮಿಂದೊಮ್ಮೆ ನನಗೆ ಯಾಕೆ ಅಡ ಕಟ್ಟಿದ್ದೀ? » ಎಂದು ಕೇಳಿದನು.

ಆಗ ಫ್ರೈಜಿಯು ಕರಕರ ಹಲ್ಲು ತಿಂದು “ದುಷ್ಟನೇ! ನನ್ನ ಸಿಟ್ಟು ಇನ್ನೂ ಶಾಂತವಾಗಲೊಲ್ಲದು. ಆ ನಿರಪರಾಧಿಯಾದ ಸಾಧ್ವಿಯು ಭ್ರಮಿಷ್ಟಳಾಗಿ ಮೃತ್ಯುಶಯ್ಯದ ಮೇಲೆ ಬಿದ್ದಿರುತ್ತಾಳೆ. ಈ ಪ್ರಕಾರ ಆಕೆಯ ದುರ್ದಶೆಯಾಗಲಿಕ್ಕೆ ಮೊದಲಿಗೆ ನಾನು ಕಾರಣನಿರುತ್ತೇನೆ. ಆ ಮೇಲೆ ನೀನು ಕಾರಣನಿರುತ್ತೀ. ನಡೆ. ನಾವಿಬ್ಬರೂ ನಮ್ಮ ನಮ್ಮ ಪಾಪದ ಪ್ರಾಯಶ್ಚಿತ್ತವನ್ನು ಭೋಗಿಸುವಾ. ಯುದ್ಧಕ್ಕೆ ಸನ್ನದ್ಧನಾಗು” ಎಂದು ನುಡಿದು ತನ್ನ ಕತ್ತಿಯನ್ನು ಒರೆಯೊಳಗಿಂದ ಹೊರಗೆ ತೆರೆದು ಝಳು ಪಿಸಿದನು.

ಮಾನಸಿಂಹನು ಆಶ್ಚರ್ಯಚಕಿತನಾಗಿ ಕೆಲವು ಹೊತ್ತಿನ ತನಕ ಅವನ ಕಡೆಗೆ ನೋಡುತ್ತ ನಿಂತುಕೊಂಡು ಫ್ರೈಜಿಯ ಗಂಭೀರ ಮುದ್ರೆ ಯನ್ನೂ ಅವನ ನಿರ್ಧಾರವನ್ನೂ ನೋಡಿ “ಮಿತ್ರಾ, ನಾನಂತೂ ಮಿತ್ರನ ಮೇಲೆ ನನ್ನ ಶಸ್ತ್ರವನ್ನು ಎತ್ತಲಾರೆನು ನಾನು ಸನ್ಯಾಸಿಯ ಅಪ್ಪಣೆಗನು ಸರಿಸಿ ಪ್ರಾಯಶ್ಚಿತ್ತದ ವ್ಯವಸ್ಥೆಯನ್ನು ನಡಿಸಿರುತ್ತೇನೆ. ನೀನು ಆ ಸನ್ಯಾಸಿಯ ಬದಲಾಗಿ ನಿನ್ನ ಕೈಯಿಂದ ನನಗೆ ಪ್ರಾಯಶ್ಚಿತ್ತವನ್ನು ಕೊಡಬೇಕಾಗಿದ್ದರೆ, ಇಕೋ! ನಾನು ನನ್ನ ಕುತ್ತಿಗೆಯನ್ನು ನಿನ್ನ ಮುಂದೆ ಚಾಚಿರುತ್ತೇನೆ. ಅದನ್ನು ಕಡಿದು ಚಲ್ಲು. ಈ ಸಮಯಕ್ಕೆ ಜೀವದಿಂದಿರುವದಕ್ಕಿಂತ ನನಗೆ ಮರಣದಿಂದ ಹೆಚ್ಚು ಸುಖವಾದೀತೆಂದು ತೋರುತ್ತದೆ. ನೀನೇ ಚೆನ್ನಾಗಿ ವಿಚಾರಮಾಡಿ ನನಗೆ ಸನ್ಯಾಸಿಯ ಅಪ್ಪಣೆಯಂತೆ ಮೊದಲಿಗೆ ಪ್ರಾಯಶ್ಚಿತ್ತ ವನ್ನು ತೆಗೆದುಕೊಳ್ಳಲಿಕ್ಕೆ ಬಿಡು.” ಎಂದು ನುಡಿದನು.

“ನಿನ್ನಂಥ ಘೋರ ಪಾತಕಿಗೆ ಸನ್ಯಾಸಿಯು ಯಾವ ಪ್ರಾಯಶ್ಚಿತ್ತ ವನ್ನು ಹೇಳಿರುವನು?” ಎಂದು ಫ್ರೈಜಿಯು ಸಿಟ್ಟಿನಿಂದ ಕೇಳಿದನು.

ಆಗ ಮಾನಸಿಂಹನು ಗುಹೆಯಲ್ಲಿ ನಡೆದ ಯಾವತ್ತು ವೃತ್ತಾಂತ ವನ್ನು ಫ್ರೈಜಿಯ ಮುಂದೆ ಹೇಳಿದನು. ಅದನ್ನು ಕೇಳಿ ಫ್ರೈಜಿಗೆ ಬಹಳ ಸಮಾಧಾನವಾಯಿತು. ಆ ಮೇಲೆ ಅವರಿಬ್ಬರೂ ಬೇರೆ ಬೇರೆ ಕಡೆಗೆ ತಮ್ಮ ತಮ್ಮ ದಾರಿಯನ್ನು ಹಿಡಿದು ಹೋದರು.

# ಭಾಗ ೧೮.

## ಅಂತ್ಯದರ್ಶನವು.

“ ತಾತ! ”

“ ಯಾಕೆ ಮುದ್ದು ಮಗುವೇ? ”

“ ನಾನೆಲ್ಲಿರುವೆನು ತಾತ? ”

“ ಹೀಗೇಕೆ ಮಾಡುತ್ತೀ ಮಗುವೆ? ನೀನು ನನ್ನ ತೊಡೆಯ ಮೇಲೆ ಮಲಗಿಕೊಂಡಿರುವಿ, ತಿಳಿಯಿತೋ? ಈಗ ನಿನಗೆ ಹೇಗೆ ಅನಿಸುತ್ತದೆ? ”

“ ತಾತನೇ! ಈ ಯಾತನೆಯನ್ನು ನನ್ನಿಂದ ಸಹಿಸುವದು ಆಗದು. ನನ್ನ ಪ್ರಿಯ ತಾತನ ತೊಡೆಯ ಮೇಲೆ ನನ್ನ ದೇಹವನ್ನು ಇಡುತ್ತೇನೆಂಬುವದೇ ಮಾತ್ರ ನನಗೊಂದು ಸುಖವು. ”

“ ಛೀ, ಮಗುವೇ, ಈ ಪ್ರಕಾರ ನೀನು ಮಾತಾಡಬೇಡ! ಸುಮ್ಮನಾಗು. ಮೊದಲೇ ಕಂದಿ ಕಮರಿಹೋದ ನನ್ನ ಹೃದಯದ ಮೇಲೆ ಈ ಪ್ರಕಾರದ ದುಃಖದ ಬರೆಯನ್ನು ಕೊಡಬೇಡ. ನೀನು ಗುಣವಾಗುವಿ. ನನ್ನ ಮುದ್ದು ಕಂದವ್ವನಾದ ನೀನು ಅಂಬರದ ಪಟ್ಟರಾಣಿಯಾಗುವಿ! ”

“ ಅಪ್ಪಾ, ನಾನು ಈ ಗಳಿಗಿಗೆ ಮಾತಾಡದಿದ್ದರೆ ಇನ್ನು ಯಾವಾಗ ಮಾತಾಡಲಿ? ಇನ್ನು ಮೇಲೆ ಸ್ವಲ್ಪಹೊತ್ತಿನ ನಂತರ ನನ್ನ ದೇಹದೊಳಗಿನ ಪ್ರಾಣವು ಹೊರಟು ಹೋಗುವದು. ಆ ಮೇಲೆ ನನ್ನಿಂದ ಮಾತಾಡುವದು ಹೇಗೆ ಆದೀತು? ತಾತಾ, ನನಗೆ ಯಾತರದೂ ಕೆಡಕು ಅನಿಸುವುದಿಲ್ಲ. ಆದರೆ– ”

ಇಷ್ಟೊಂದು ಮಾತಾಡಿದ್ದರಿಂದ ಸುಶೀಲೆಗೆ ಗ್ಲಾನಿಯು ಬಂತು ಅವಳು ಪುನಃ ನಿಶ್ಚೇಷ್ಟಿತಳಾದಳು. ಅಕಟಕಟಾ! ಈ ಸಮಯದ ಹೃದಯ ದ್ರಾವಕ ಪ್ರಸಂಗದಲ್ಲಿ ಎಂಥ ಪಾಷಾಣ ಹೃದಯನಿಗೂ ಕನಿಕರವೆನಿಸದೆ ಇರಲಿಕ್ಕಿಲ್ಲ. ಅಂದಮೇಲೆ ಸುಶೀಲೆಯನ್ನು ತನ್ನ ಹೊಟ್ಟೆಯ ಮಗಳಂತೆ ಪಾಲನಪೋಷಣ ಮಾಡಿದಂಥ ಆ ವೃದ್ಧ ತಪಸ್ವಿಗೆ ಎಷ್ಟು ಸಂಕಟವಾಗಿದ್ದೀತೆಂಬದನ್ನು ವರ್ಣಿಸಲಿಕ್ಕೆ ನಮ್ಮ ಲೇಖನಿಯು ಅಸಮರ್ಥವಾಗಿಹುದು.

ಸುಶೀಲೆಯು ಪುನಃ ಸ್ವಲ್ಪಹೊತ್ತಿನ ತರುವಾಯ ಎಚ್ಚರಿಕೆಯ ಮೇಲೆ ಬಂದು ನಿರ್ಬಲವಾದ ಸ್ವರದಿಂದ—“ತಾತನೇ! ಭಯಂಕರವಾದ ಕತ್ತಲವು ಮುಸುಕಿರುವ ಈ ಕಲ್ಲಿನ ಗವಿಯಲ್ಲಿ ನನ್ನಿಂದ ಸಾಯುವದು ಆಗದು! ಇಲ್ಲಿ ನಾನು ಸತ್ತರೆ ಸುಖವೆನಿಸಲಿಕ್ಕಿಲ್ಲ. ನಾನು ತಾಯಿಯ ತೊಡೆಯ ಮೇಲೆ ಆಡುತ್ತಿದ್ದಾಗ ನೀವು ನನ್ನನ್ನು ಅರ್ಭಕಾವಸ್ಥೆಯೊಳಗೆ ಎತ್ತಿಕೊಂಡು ಬಂದು ಹೊಟ್ಟೆಯ ಕೂಸಿನಂತೆ ಲಾಲನಪಾಲನಮಾಡಿ ಸಣ್ಣವಳನ್ನು ದೊಡ್ಡವಳು ಮಾಡಿದಿರಿ. ನೀವು ನನ್ನ ಮೇಲೆ ನನ್ನ ಪಿತನಕಿಂತ ಹೆಚ್ಚು ಪ್ರೇಮಮಾಡಿ ನನ್ನ ಕಲ್ಯಾಣಕ್ಕಾಗಿ ನಿಮ್ಮ ಜೀವವನ್ನು ಬೇಕಾದಷ್ಟು ಸಣ್ಣ ಮಾಡಿಕೊಂಡಿರಿ. ನಾನು ನಿಮ್ಮ ತೊಡೆಯ ಮೇಲೆಯೇ ಜೀವವನ್ನು ಬಿಡುತ್ತೇನೆ. ಆದರೆ–” ಎಂದು ನುಡಿದಳು.

“ಆದರೆ ಮತ್ತೇನು ಮಗುವೇ?”

“ಒಂದು ಸಾರೆ ನೋಡಬೇಕೆನ್ನುತ್ತೇನೆ. ಮರಣದ ಮುಂಚೆ ಒಂದು ಸಾರೆ–”

ಸುಶೀಲೆಗೆ ಮುಂದೆ ಮಾತಾಡುವದಾಗಲಿಲ್ಲ. ಆಕೆಯ ಶುಷ್ಕನೇತ್ರಗಳು ಕಣ್ಣೀರಿನಿಂದ ತುಂಬಿದವು, ಆಕೆಯ ನಿಸ್ತೇಜ ಕಪೋಲಗಳು ಅಶ್ರುಧಾರೆಯಿಂದ ತೊಯ್ದುವು. ಇದನ್ನು ನೋಡಿ ಆ ವೃದ್ಧ ತಪಸ್ವಿಯ ಎದೆಯು ಒಡೆದುಹೋಯಿತು. ಸುಶೀಲೆಯ ಅಶ್ರುಧಾರೆಯೂ, ಕರುಣಾಸ್ಪದ ಭಾಷಣವೂ ಅತ್ಯಂತ ಹೃದಯದ್ರಾವಕವಿದ್ದವು. ಆಗ ಆ ವೃದ್ಧ ಸನ್ಯಾಸಿಯು ಕಠಿಣ ಮನಸ್ಸು ಮಾಡಿ “ಮಗುವೇ, ನೀನು ಚಿಂತೆ ಮಾಡಬೇಡ. ಆ ದೀನದಯಾಲುವಾದ ಪರಮೇಶ್ವರನು ನಿನ್ನ ಇಚ್ಛೆಯನ್ನು ಪೂರ್ಣ ಮಾಡದೆ ಎಂದಿಗೂ ಇರಲಾರನು. ಅಂಬರಾಧಿಪತಿಯು ನಾಳೆ ಬೆಳಗಾಗುವ ಮುಂಚೆ ನಿಶ್ಚಯವಾಗಿ ಬರುವನು” ಎಂದು ಹೇಳಿದನು.

“ಆದರೆ ತಂದೆಯೇ! ನಾನು ಆಹೊತ್ತಿನ ವರೆಗೆ ಬದುಕಲಾರೆನು. ಈ ಗುಹೆಯೊಳಗಿನ ಭಯಂಕರ ಅಂಧಃಕಾರವು ನನಗೆ ಸಹನವಾಗದು. ಬಾಲ್ಯದಾರಭ್ಯ ಅರಣ್ಯದೊಳಗಿನ ನಿರಾತಂಕ ಗಾಳಿಯೊಳಗೆ ಪರ್ಣಕುಟಿಯಲ್ಲಿ ವಾಸಮಾಡಿದ ನನಗೆ ಈ ಭಯಂಕರ ಕತ್ತಲಗವಿಯೊಳಗೆ ಆಗುವ

ಅಂತ್ಯಸಮಯದ ಯಾತನೆಗಳನ್ನು ನನ್ನಿಂದ ಹೇಳಲಸಾಧ್ಯವು. ನನ್ನನ್ನು ಹೊರಗೆ ಒಯ್ಯಿರಿ. ತಾತಾ, ನಾನು ಇನ್ನು ಮೇಲೆ ಬದುಕುವದಿಲ್ಲ. ನನ್ನ ಆಯುಷ್ಯದ ನಾಡಿಯು ಇನ್ನು ಕಡಿದಂತಾಯಿತು. ಸ್ವರ್ಗವು ಎಷ್ಟು ದೂರವಿರುತ್ತದೆಂಬುವದು ನನಗೆ ತಿಳಿಯಲೊಲ್ಲದು. ಆದರೆ ಸ್ವರ್ಗದ ಸುಂದರ ಬಾಗಿಲವು ತೆರೆದಿಟ್ಟದ್ದು ನನಗೆ ಕಾಣಿಸಲಿಕ್ಕೆ ಹತ್ತಿರುತ್ತದೆ. ಆ ಬಾಗಿಲದ ಹತ್ತರ ನಿಂತುಕೊಂಡಿರುವ ಸುಂದರ ದೇವಬಾಲಿಕೆಯರು ನನ್ನನ್ನು ಅತ್ಯಾದರದಿಂದ ಕರೆಯಲಾರಂಭಿಸಿರುತ್ತಾರೆ. ದುಂದುಭಿಗಳು ಮೊಳಗಿರುತ್ತವೆ ಶಂಖದ ಮಂಗಳಧ್ವನಿಯು ಕೇಳಬರುತ್ತಲಿದೆ. ಪಾರಿಜಾತ ಪುಷ್ಪದ ಮಧುರ ಸುಗಂಧವು ದಶದಿಶೆಗಳಲ್ಲಿ ಪಸರಿಸಿರುವದು. ತಂದೆಯೇ, ನಾನು ಇನ್ನು ಹೋಗುತ್ತೇನೆ—" ಎಂದು ಸುಶೀಲೆಯು ನುಡಿದಳು.

ಸನ್ಯಾಸಿಯು ಹಸುಗೂಸಿನಂತೆ ಅಳಲಿಕ್ಕೆ ಆರಂಭಿಸಿ ಸ್ವಲ್ಪ ಹೊತ್ತಿನ ತರುವಾಯ "ಮಗುವೇ! ಅರಸನು ಈಗ ಬರುವನು. ನೀನು ಅಧೈರ್ಯ ಪಡಬೇಡ. ನಾನು ನನ್ನ ಮಗುವನ್ನು ಶಕುಂತಲೆಯಂತೆ ರಾಜಧಾನಿಗೆ ಮುಟ್ಟಿಸಿ ಬರುತ್ತೇನೆ. ನನ್ನ ಸುಶೀಲೆಯು ಅಂಬರಪ ಪಟ್ಟರಾಣಿಯಾಗುವಳು" ಎಂದು ಮಾತಾಡಿದನು

"ತಂದೆಯೇ! ಆ ಪಟ್ಟರಾಣಿಯಾಗುವ ಅಭಿಲಾಷೆಯು ಪೂರ್ಣವಾಗಿ ತೃಪ್ತವಾಯಿತು. ನಾನು ದೇವರ ಹತ್ತರ ಹೋದಬಳಿಕ 'ದೇವರೇ! ಯಾವ ಸ್ತ್ರೀಗೂ ಅರಸನ ರಾಣಿಯಾಗಿ ಮಾಡಬೇಡ. ಅವಳನ್ನು ಬೇಕಾದ ಸ್ಥಿತಿಯಲ್ಲಿಡು. ತಿರುಕಳಿಗಿಂತ ತಿರುಕಳಾಗಿ ಮಾಡಿದರೂ ಚಿಂತಿಲ್ಲ. ಅರಸನ ರಾಣಿಯಾಗಿ ಮಾಡಬೇಡ. ನಾನು ನಿಜವಾಗಿಯೂ ರಾಣಿಯಾಗದಿದ್ದರೆ ಈ ಪ್ರಕಾರ ನನ್ನ ದುರ್ದಶೆಯು ಯಾಕೆ ಆಗುತ್ತಿತ್ತು? ನಾನು ಮುನಿಕನ್ಯೆಯು, ದಾರಿಯಲ್ಲಿ ತಿರಕೊಳ್ಳುವವಳು, ಅನಾಥ ಸ್ತ್ರೀಯಳು. ಹೀಗಿದ್ದು ನನ್ನನ್ನು ರಾಣಿಪದದ ಮೇಲೆ ಏಕೆ ಕುಳ್ಳಿರಿಸಿದಿ? ನೀನು ನನ್ನನ್ನು ರಾಣೀ ಪದದ ಮೇಲೆ ಕುಳ್ಳಿರಿಸಿದಾಗ್ಯೂ ಆ ಉಚ್ಚಪದವನ್ನು ರಕ್ಷಣ ಮಾಡಿಕೊಳ್ಳುವ ಶಕ್ತಿಯು ಈ ದರಿದ್ರಿಗೆ ಎಲ್ಲಿಂದ ಬರಬೇಕು? ಆದ್ದರಿಂದ ನೀನು ನನ್ನನ್ನು ಎಂದೆಂದಿಗೂ ರಾಣಿಯಾಗಿ ಮಾಡಬೇಡ' ಎಂದು

ಆತನಿಗೆ ಕೈಕಾಲು ಮುಗಿದು ಹೇಳಿಕೊಳ್ಳುವೆನು. ತಂದೆಯೇ! ಈ ಜನ್ಮ ವಲ್ಲಿ ಈ ಪಾಪಿಷ್ಠಳ ಕೈಯಿಂದ ಪತಿಸೇವೆಯು ಏನೂ ಘಟಸಲಿಲ್ಲೆಂದು ನನಗೆ ಅತ್ಯಂತ ದುಃಖವಾಗುತ್ತದೆ. ದೇವಲೋಕಕ್ಕೆ ಹೋದ ಮೇಲಾದರೂ ನನ್ನಿಂದ ಆ ಸೇವೆಯು ಘಟಿಸಿ ನನ್ನ ಸ್ತ್ರೀಜನ್ಮವು ಸಫಲವಾಗಲೆಂದು ನನಗೆ ಆಶೀರ್ವಾದವನ್ನು ಮಾಡು. ಈ ಜನ್ಮದಲ್ಲಿ ಹಾಗೆಯೇ ಉಳಿದಂಥ ನನ್ನ ಅಪೇಕ್ಷೆಗಳು ನಿನ್ನ ಮಂಗಲ ಆಶೀರ್ವಾದದಿಂದ ದೇವಲೋಕದಲ್ಲಿ ಪೂರ್ಣ ವಾಗಬಹುದು. ಆದ್ದರಿಂದ ನನಗೆ ಸುಖದ ಸಾವು ಬರಲೆಂದು ಆಶೀರ್ವಾದ ಮಾಡು"

"ಮಗುವೇ, ಈ ನಿನ್ನ ಶಬ್ದಗಳನ್ನು ನಾನು ಕಿವಿಯಿಂದ ಕೇಳಲಾ ರೆನು! ಈ ಪ್ರಕಾರ ನನ್ನ ಮನೋವೃತ್ತಿಗೆ ಸಿಡಿಲುಗಳ ಹೊಡತದಂತೆ ನೋವು ಪಡಿಸಬೇಡ. ನಿನ್ನ ಯಾವತ್ತು ಅಪೇಕ್ಷೆಗಳನ್ನು ಪರಮೇಶ್ವರನು ಪೂರ್ಣ ಮಾಡುವನು ಮಗುವೇ! ಈ ಮಾಯಾಮೋಹಯುಕ್ತವಾದ ಸಂಸಾರ ವನ್ನು ತ್ಯಾಗಮಾಡಿ ಅರಣ್ಯದೊಳಗೆ ಪರ್ಣಕುಟಿಯಲ್ಲಿ ವಾಸಮಾಡುವ ನನಗೆ ಸಹ ನಿನ್ನ ಮಾಯೆಯು ಸಂಸಾರಿಕನಾಗಿ ಮಾಡಿತು. ಈ ಹತ ಭಾಗ್ಯನಿಗೆ ತಾಯಿಯಿಲ್ಲ, ತಂದೆ ಇಲ್ಲ, ತಂಗಿ ಇಲ್ಲ, ಸ್ತ್ರೀ-ಕನ್ಯಾ-ಪುತ್ರ ಮೊದಲಾದವರು ಯಾರೂ ಇಲ್ಲ. ನೀನೊಬ್ಬಳೇ ನನಗೆ ಇರುತ್ತೀ. ನಿನ್ನ ಮೇಲಿನ ಮಾಯೆಯಿಂದ ನನ್ನ ಜಪತಪಗಳು ನಿಂತವು. ಶಾಸ್ತ್ರಾಧ್ಯ ಯನವು ಹೋಯಿತು. ಯೋಗಸಾಧನವು ಅಡಗಿತು. ಪರಮೇಶ್ವರ ಚಿಂತನವು ದೂರಾಯಿತು. ಸಾಮರ್ಥ್ಯವು ವಿರಾಮಹೊಂದಿತು. ಸಿದ್ಧಿ ಯು ಮಂದವಾಯಿತು! ಸಾರಾಂಶ, ನೀನೊಬ್ಬಳೇ ನನಗೆ ಉಳಿದಿರುತ್ತೀ. ಈಗ ನೀನೂ ನನ್ನಿಂದ ಅಗಲಿದ ಮೇಲೆ ನಾನು ಇಲ್ಲಿ ಯಾವ ಆಶೆಯಿಂದ ಜೀವಿಸಲಿ? ಈ ಪ್ರಕಾರ ನೀನು ಪುನಃ ಅಮಂಗಲ ಭಾಷಣವನ್ನು ಮಾಡಿ ನನ್ನ ಎದೆಯನ್ನು ಒಡಿಸಬೇಡ. ಅದನ್ನು ನನ್ನಿಂದ ಸರ್ವಥಾ ಕೇಳುವ ದಾಗದು!"

"ತಂದೆಯೇ, ಈಗ ಮಾತಾಡಿದ್ದನ್ನು ಕ್ಷಮಿಸು. ಇನ್ನು ಮೇಲೆ ಮಾತಾಡುವದಿಲ್ಲ."

ಒಮ್ಮೆಲೆ ಎಚ್ಚತ್ತನು. ಈ ಎಲ್ಲ ಸಪ್ಪಳವು ಸುಶೀಲೆಯ ಕಿವಿಯಲ್ಲಿ ಬಿದ್ದದ್ದರಿಂದ ಅವಳು "ತಂದೆಯೇ, ನನ್ನನ್ನು ಕರೆಯಲಿಕ್ಕೆ ದೇವದೂತರು ಬಂದಿರುತ್ತಾರೆ. ದುಂದುಭಿಯ ಸಪ್ಪಳವೂ ವಾದ್ಯಧ್ವನಿಯೂ ನಿಮಗೆ ಕೇಳಿಸುವದಿಲ್ಲವೇ? ಈ ಪಲ್ಲಕ್ಕಿಯು ನಿಮಗೆ ಕಾಣಿಸುವದಿಲ್ಲವೇ? ನನ್ನನ್ನು ಬೇಗನೆ ಕಳಿಸಿಕೊಡು. ನಾನು ಇನ್ನು ಹೋಗಿಬರುತ್ತೇನೆ. ಅಪ್ಪ! ನನಗೆ ನೀರಡಿಕೆಯಾಗಿರುತ್ತದೆ. ಕುಡಿಯಲಿಕ್ಕೆ ಸ್ವಲ್ಪ ನೀರು ಕೊಡು." ಎಂದಳು.

ಆಗ ಸನ್ಯಾಸಿಯು ಸುಶೀಲೆಯ ಬಾಯಿಯಲ್ಲಿ ಸ್ವಲ್ಪ ಗಂಗಾಜಲವನ್ನು ಹಾಕಿದನು. ಇಷ್ಟರಲ್ಲಿ ಮಾನಸಿಂಹನು ಅಲ್ಲಿಗೆ ತ್ವರೆಯಿಂದ ದಮ್ಮು ಹತ್ತಿ ಬಂದನು. ಅವನನ್ನು ನೋಡಿದವನೇ ಸನ್ಯಾಸಿಯು "ರಾಜನೇ ಬಂದಿಯಾ? ಒಳ್ಳೇದಾಯಿತು. ಕೇಳಿತುಕೋ. ಯಾವತ್ತು ಗ್ರಂಥವು ಇನ್ನು ಮುಗಿಯಿತು. ಈಶ್ವರನು ಈ ನನ್ನ ಪಾಪಿಷ್ಠ ಕೈಗೆ ಯಶಸ್ಸು ಕೊಡಲಿಲ್ಲ" ಎಂದು ನುಡಿದನು. ಮುಂದೆ ಅವನಿಂದ ಮಾತಾಡುವದಾಗಲಿಲ್ಲ.

ಸುಶೀಲೆಯನ್ನು ಪಟ್ಟರಾಣಿಯ ಸಡಗರದಿಂದ ರಾಜಧಾನಿಗೆ ಕರೆದುಕೊಂಡು ಹೋಗುವದಕ್ಕಾಗಿ ಮಾನಸಿಂಹನು ಅಸಂಖ್ಯ ಆನೆ, ಕುದುರೆ, ಪಲ್ಲಕ್ಕಿ, ಮೇಣೆ, ಸೈನ್ಯ ಮೊದಲಾದವುಗಳನ್ನು ತೆಗೆದುಕೊಂಡು ಬಂದಿದ್ದನು. ಅಂಬರ ರಾಜಧಾನಿಯಲ್ಲಿ ಪ್ರತಿಯೊಂದು ಬೀದಿಯನ್ನೂ, ಮನೆಯನ್ನೂ, ತೋರಣ-ತಳಿರು-ಕದಳೀ ಸ್ತಂಭಗಳಿಂದ ಶೃಂಗರಿಸುವದಕ್ಕೆ ಪ್ರಜೆಗಳಿಗೆ ಆಜ್ಞೆಯನ್ನು ಕೊಟ್ಟಿದ್ದನು. ಆದ್ದರಿಂದ ರಾಜಧಾನಿಯಲ್ಲಿ ಮಂಗಲೋತ್ಸವವು ಬಹು ವಿಜೃಂಭಣೆಯಿಂದ ನಡೆದಿತ್ತು. ಆದರೆ ಸಿದ್ಧತೆಯು ಯಾರಿಗೋಸ್ಕರ? ಸುಶೀಲೆಯು ಇಹಲೋಕವನ್ನು ಬಿಟ್ಟು ಹೋದನಂತರ ತಾನು ತನ್ನ ಸಂಗಡ ಯಾರನ್ನು ಕರೆದುಕೊಂಡು ಹೋಗಬೇಕು? ಎಂದು ಮಾನಸಿಂಹನು ಬಹಳ ಪ್ರಲಾಪಿಸಿ ಸದ್ಗದಿತ ದೀನಸ್ವರದಿಂದ ಸುಶೀಲೆಯನ್ನು ಕೂಗಿ. "ಸುಶೀಲೇ! ನಿನ್ನನ್ನು ಕರೆದುಕೊಂಡು ಹೋಗುವದಕ್ಕೆ ಬಂದಿರುತ್ತೇನೆ. ನನ್ನ ಕಡೆಗೆ ದಯಮಾಡಿ ಒಮ್ಮೆ ಕಣ್ಣು ತೆರೆದುನೋಡು" ಎಂದು ಹೇಳಿದನು.

ಸುಶೀಲೆಯ ಪ್ರಾಣವು ನಾಸಿಕಾಗ್ರಕ್ಕೆ ಏರಿತು. ಅವಳ ಯಾವತ್ತು ಇಂದ್ರಿಯಗಳು ಗಲಿತವಾಗಿದವು. ಜ್ಞಾನಶಕ್ತಿಯು ಲೋಪವಾಗುತ್ತ

ಬಂದಿತ್ತು. ಆದಾಗ್ಯೂ ಅಂಥ ಸ್ಥಿತಿಯಲ್ಲಿ ಅವಳು ಮಾನಸಿಂಹನ ಕಡೆಗೆ ಕಣ್ಣೆತ್ತಿ ನೋಡಿ ಅವನ ಗುರುತು ಹಿಡಿದು, ಕಣ್ಣೀರು ಸುರಿಸುತ್ತ “ಪತಿದೇವರೇ, ಈ ದಾಸಿಗೆ ಕೊನೆಯ ಬೆಟ್ಟಿಯನ್ನು ಕೊಡಲಿಕ್ಕೆ ಬಂದಿರಾ? ನಿಮ್ಮ ದರ್ಶನಕ್ಕಾಗಿಯೇ ನನ್ನ ಪ್ರಾಣವನ್ನು ಇಷ್ಟೊತ್ತಿನ ತನಕ ಗಟ್ಟಿಯಾಗಿ ಹಿಡಿದಿದ್ದೆನು. ಈಗ ಚರಣದರ್ಶನವಾಯಿತು. ನನ್ನ ಎಲ್ಲ ಮನಕಾಮನವು ಪೂರ್ಣವಾಯಿತು. ಇನ್ನು ನಾನು ಹೋಗುತ್ತೇನೆ. ಪ್ರಾಣನಾಥರೇ! ನಿಮ್ಮ ಚರಣಸೇವೆಯು ನನಗೆ ಬಹಳ ದಿವಸ ಘಟಿಸಲಿಲ್ಲವೆಂಬದೊಂದು ಅಪೇಕ್ಷೆಯು ಉಳಿಯಿತು. ದೇವಲೋಕದಲ್ಲಿ ಆ ನನ್ನ ಅಪೇಕ್ಷೆಯು ಪೂರ್ಣವಾಗಲೆಂದೂ ಈ ದಾಸಿಗೆ ಯಾವಜ್ಜನ್ಮದಲ್ಲಿಯೂ ಈ ಚರಣದ ಲಾಭವು ಉಂಟಾಗಲೆಂದೂ ಆಶೀರ್ವಾದವನ್ನು ಮಾಡಿರಿ. ಪ್ರಾಣೇಶ್ವರಾ! ಇನ್ನು ನಾನು ಹೋಗಿಬರುತ್ತೇನೆ ಅಪ್ಪಣೆಯನ್ನು ಕೊಡಿರಿ” ಎಂದು ನುಡಿದಳು.

ದೀಪವು ನೊಂದುವ ಹೊತ್ತಿಗೆ ಅದು ಹೆಚ್ಚು ಪ್ರಕಾಶಮಯವಾಗುವಂತೆ ಸುಶೀಲೆಯ ಸುಕುಮಾರ ಮುಖಕಮಲವು ಸ್ವರ್ಗತೇಜಸ್ಸಿನಿಂದ ಹೆಚ್ಚು ಪ್ರಫುಲ್ಲಿತವಾಗಿರಲು ಅವಳು ಪತಿಚರಣದ ಮೇಲೆ ತನ್ನ ಮಸ್ತಕವನ್ನಿಟ್ಟು ದೇವಲೋಕಕ್ಕೆ ಹೊರಟು ಹೋದಳು.

## ಭಾಗ ೧೯
### ಉಪಸಂಹಾರ.

ಆ ಬಳಿಕ ಮಾನಸಿಂಹನು ಸುಶೀಲೆಯ ಮೃತದೇಹಕ್ಕೆ ಪರಿಮಳವನ್ನು ಪೂಸಿ ಅದನ್ನು ಮಕಮಲದಿಂದ ಆಚ್ಛಾದಿತವಾದ ಒಂದು ಬೆಳ್ಳಿಯ ಸಿದಿಗೆಯಲ್ಲಿ ಮಲಗಿಸಿ ಒಂದು ಸುಂದರ ಪಲ್ಲಕ್ಕಿಯೊಳಗೆ ಹಾಕಿಕೊಂಡು ರಾಜಧಾನಿಗೆ ಮೆರವಣಿಗೆಯಿಂದ ತೆಗೆದುಕೊಂಡು ಹೋದನು. ಸುಶೀಲೆಯ ಪಲ್ಲಕ್ಕಿಯ ಮುಂಬದಿಯಲ್ಲಿ ಅನೇಕ ಕಾಲಬಲವೂ ಆನೆ-ಕುದುರೆ-ರಾಹುತರೂ ನಡೆದಿದ್ದರು. ಸುಶೀಲೆಯ ಪಲ್ಲಕ್ಕಿಯ ಎರಡೂ ಭಾಗಗಳಲ್ಲಿ ದಾಸಿಯರು ತಮ್ಮ ಕೈಯಲ್ಲಿ ಚೌರಿಗಳನ್ನೂ, ಬೀಸಣಿಕೆಗಳನ್ನೂ ಹಿಡಿದುಕೊಂಡು

ಅವುಗಳನ್ನು ಬೀಸುತ್ತ ದಾರಿಯಿಂದ ನಡೆದಿದ್ದರು. ಆ ಪಲ್ಲಕ್ಕಿಯ ಹಿಂಬದಿಯಲ್ಲಿ ಸಹ ಅನೇಕ ಮಂದಿ ಸೈನಿಕರೂ ಅನೇಕ ಮಂದಿ ರಾಹುತರೂ ನಡೆದಿದ್ದರು ಈ ಪ್ರಕಾರ ಸಡಗರದಿಂದ ನಡೆದಿದ್ದ ಮೆರವಣಿಗೆಯು ಊದುತ್ತ, ಬಾರಿಸುತ್ತ ಅಂಬರನಗರಕ್ಕೆ ಬಂದು ತಲ್ಪಿತು.

ರಾಜಾಜ್ಞೆಗನುಸರಿಸಿ ನಗರದೊಳಗೆ ಎಲ್ಲಿ ನೋಡಿದಲ್ಲಿ ಉತ್ಸವವು ಮೊಳಗಿತ್ತು. ತಮ್ಮ ಹೊಸ ಪಟ್ಟರಾಣಿಯ ಸ್ವಾಗತ ಮಾಡುವ ಲವಲವಿಕೆಯಿಂದ ಪೌರಸ್ತ್ರೀಯರು ಕೈಯಲ್ಲಿ ಪುಷ್ಪಮಾಲಿಕೆಗಳನ್ನು ಹಿಡಿದುಕೊಂಡು ತಮ್ಮ ತಮ್ಮ ಮನೆಯ ಕಿಡಕಿಗಳಲ್ಲಿ ನಿಂತು, ಪಟ್ಟರಾಣಿಯ ಆಗಮನವನ್ನು ನಿರೀಕ್ಷಿಸುತ್ತಿದ್ದರು. ನಗರದೊಳಗಿನ ಆಬಾಲವೃದ್ಧಪುರುಷರು ಪಟ್ಟರಾಣಿಯನ್ನು ಇದಿರುಗೊಂಡು ಕರೆದುಕೊಂಡು ಬರುವದಕ್ಕಾಗಿ ನಗರದ ಅಗಸಿಗೆ ಹೋಗಿ ಈ ಮೆರವಣಿಗೆಯನ್ನು ನಗರದೊಳಗೆ ಹೊರಡಿಸಿಕೊಂಡು ಬಂದ ತರುವಾಯ ಕುಲಸ್ತ್ರೀಯರು ಅವಳ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು. ಈ ಪ್ರಕಾರ ಆ ಪಲ್ಲಕ್ಕಿಯು ಮೆಲ್ಲಮೆಲ್ಲನೆ ಅರಮನೆಗೆ ಬಂದು ತಲ್ಪಿತು. ಅಲ್ಲಿ ಅಂತಃಪುರದೊಳಗೆ ರಾಜಸ್ತ್ರೀಯರು ಕೈಯಲ್ಲಿ ಸುವರ್ಣ ಕಲಶಗಳನ್ನೂ ಗಂಧ ಪುಷ್ಪ ಮೊದಲಾದ ಮಂಗಲದ್ರವ್ಯಗಳನ್ನೂ ಹಿಡಿದುಕೊಂಡು ಪಟ್ಟರಾಣಿಯ ಮಾರ್ಗಪ್ರತೀಕ್ಷೆ ಮಾಡುತ್ತ ನಿಂತುಕೊಂಡಿದ್ದರು. ಅವರೆಲ್ಲರ ಮುಂದೆ ರಾಣಿ ಕಮಲಕುಮಾರಿಯು ನಿಂತುಕೊಂಡಿದ್ದಳು. ಪಲ್ಲಕ್ಕಿಯನ್ನು ಹೊತ್ತುಕೊಂಡವರು ಅರಮನೆಯ ಬಾಗಿಲ ಮುಂದೆ ಪಲ್ಲಕ್ಕಿಯನ್ನು ಇಳಿಸಿದ ಕೂಡಲೆ ರಾಜಸ್ತ್ರೀಯರು ಪಟ್ಟರಾಣಿಯ ದರ್ಶನ ತೆಗೆದುಕೊಳ್ಳುವದಕ್ಕೆ ಉತ್ಕಂಠಿತರಾಗಿ ಪಲ್ಲಕ್ಕಿಯ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು. ಮಹಾರಾಜ ಮಾನಸಿಂಹನು ಹಾಗೂ ಹೀಗೂ ಪ್ರಯತ್ನಮಾಡಿ ಇಷ್ಟೊತ್ತಿನ ತನಕ ತನ್ನ ದುಃಖವನ್ನು ಮನಸ್ಸಿನಲ್ಲಿ ನುಂಗಿಕೊಂಡು ಗಂಭೀರ ವೃತ್ತಿಯನ್ನು ಧರಿಸಿದ್ದನು. ಆದರೆ ಈಗ ಒಮ್ಮಿಂದೊಮ್ಮೆ ಅವನು ತನ್ನ ಕಣ್ಣೊಳಗೆ ನೀರು ತಂದು ತನ್ನ ನಿಸ್ತೇಜವಾದ ಮೋರೆಯನ್ನು ಕೆಳಗೆ ಬಾಗಿಸಿ ಸುಮ್ಮನೆ ನಿಂತನು. ಮಾನಸಿಂಹನ ಚಮತ್ಕಾರಿಕ ಮುದ್ರೆಯನ್ನು ನೋಡಿ ರಾಣಿ ಕಮಲಕುಮಾರಿಯು ವ್ಯಥೆಪಟ್ಟು—“ಮಹಾರಾಜರೇ! ಈ ಮಂಗಲ ಸಮ

ಯದೊಳಗೆ ನಿಮ್ಮ ಕಣ್ಣೊಳಗೆ ದುಃಖಾಶ್ರುಗಳು ಯಾಕೆ?" ಎಂದು ಕೇಳಿದಳು.

ಆಗ ಮಾನಸಿಂಹನು ತನ್ನ ಭಯಕಂಪಿತ ಹಸ್ತಗಳಿಂದ ಆ ಪಲ್ಲಕ್ಕಿಯ ಮೇಲಿನ ಮಕಮಲದ ಕೆಂಪು ರೇಶ್ಮೆಯ ವಸ್ತ್ರವನ್ನು ಒಂದು ಮಗ್ಗಲಿಗೆ ಸರಿಸಿದ ಕೂಡಲೆ ರಾಣಿ ಕಮಲಕುಮಾರಿಯು ಆರ್ತಸ್ವರದಿಂದ ದೊಡ್ಡ ಭಯಂಕರವಾದ ಕೂಗನ್ನು ಕೂಗಿ ಅಂಜಿಕೆಯಿಂದ ಹಿಂದೆ ಸರಿದಳು. ಕೆಲವು ಹೊತ್ತಿನ ಮೇಲೆ ಅವಳು ಮಾನಸಿಂಹನಿಗೆ—"ಮಹಾರಾಜರೇ, ಇದೇನು ಭಯಂಕರ ಪ್ರಕಾರವು?" ಎಂದು ವಿಚಾರಿಸಿದಳು.

"ಇದೆಲ್ಲ ನನ್ನ ಅಪೂರ್ಣ ವಿಚಾರದ ಪರಿಣಾಮವು! ಅಂಬರದ ಪಟ್ಟರಾಣಿಯು ಬಂದಿರುತ್ತಾಳೆ. ನೀವೆಲ್ಲರೂ ಅವಳಿಗೆ ವಂದಿಸಿರಿ!" ಎಂದು ಮಾನಸಿಂಹನು ಹೇಳಿದನು.

ರಾಜಾಜ್ಞೆಗನುಸರಿಸಿ ಯಾವತ್ತು ರಾಣಿಯರು ಸುಶೀಲೆಯ ಮೃತ ದೇಹಕ್ಕೆ ಸನ್ಮಾನವನ್ನು ಮಾಡಿದರು. ರಾಣಿ ಕಮಲಕುಮಾರಿಯು ಆ ಸಿದಿಗೆಯಲ್ಲಿ ಶಾಂತವಾಗಿ ಸುಖನಿದ್ರೆಗೈಯ್ಯುತ್ತಿದ್ದ ಪಟ್ಟರಾಣಿಯ ಮುಖ ಕಮಲದ ಕಡೆಗೆ ಏಕಾಗ್ರದೃಷ್ಟಿಯಿಂದ ನೋಡಹತ್ತಿದಾಗ ಆ ಸುಂದರ ಮುಖದ ಮೇಲೆ ಲೋಕೋತ್ತರವಾದ ಲಾವಣ್ಯದ ಪ್ರಕಾಶವು ಕಂಗೊಳಿಸಿತು. ರಾಣಿ ಕಮಲಕುಮಾರಿಯು ಆ ಶಾಂತಿಪೂರ್ಣ-ಪ್ರೀತಿಪೂರ್ಣ-ಸ್ನೇಹಪೂರ್ಣ-ಜ್ಯೋತಿರ್ಮಯ ಪವಿತ್ರ-ಮುಖಕಮಲವನ್ನು ನೋಡುತ್ತ ಬಹಳೊತ್ತು ಕುಳಿತಳು. ಏನು ಮಾಡಿದರೂ ಆಕೆಯು ತನ್ನ ದೃಷ್ಟಿಯನ್ನು ಅಲ್ಲಿಂದ ತಿರುಗಿಸದಾದಳು. ಆ ದೇವಬಾಲೆಯಾದ ಸುಶೀಲೆಯು ನಗನಗುತ್ತ ದೇವಲೋಕಕ್ಕೆ ಹೊರಟು ಹೋಗಿದ್ದಳು. ಈ ಪ್ರಕಾರ ಅಲ್ಲಿ ನೋಡುತ್ತ ಕುಳಿತಿದ್ದ ಕಮಲಕುಮಾರಿಯ ದುಃಖವು ಹೆಚ್ಚಾಗಲು ಅವಳು ಆ ಸ್ಥಳವನ್ನು ಬಿಟ್ಟು ಹೊರಟುಹೋದಳು.

ಆ ಮೇಲೆ ಮಾನಸಿಂಹನು ಸುಶೀಲೆಯ ಮೃತದೇಹಕ್ಕೆ ಅಗ್ನಿ ಸಂಸ್ಕಾರವನ್ನು ಮಾಡಿ, ಯಥಾಪ್ರಕಾರ ಉತ್ತರಕ್ರಿಯೆಗಳನ್ನು ಮಾಡಿ, ಸುಶೀಲೆಯ ಚಿತಾಭಸ್ಮವನ್ನು ಒಂದು ಸುವರ್ಣ ಪಾತ್ರೆಯಲ್ಲಿ ಇರಿಸಿ, ಅಂಬ

ರದ ಅರಮನೆಯ ಹತ್ತರ ಸಂಗಮರವರಿಯ ಕಲ್ಲಿನಿಂದ ಕಟ್ಟಿಸಿದ ಹಿರಣ್ಯ ಮಂದಿರದೊಳಗೆ ಆ ಸುವರ್ಣ ಪಾತ್ರೆಯನ್ನು ಹೂಳಿ, ಆ ಮಂದಿರದ ಮೇಲೆ ಸುಶೀಲೆಯ ಸುವರ್ಣ ಪ್ರತಿಮೆಯನ್ನು ಸ್ಥಾಪಿಸಿದನು. ಮಾನಸಿಂಹನು ತಾನು ಜೀವಂತವಿರುವ ತನಕ ಆಗಾಗ ಆ ಪ್ರತಿಮೆಯ ಮುಂದೆ ಹೋಗಿ ನಿಂತು ಸುಶೀಲೆಯನ್ನು ನೆನಿಸಿಕೊಂಡು ತಾನು ಮಾಡಿದ ಅಪರಾಧದ ಬಗ್ಗೆ ಅವಳ ಕ್ಷಮೆಯನ್ನು ಬೇಡಿಕೊಳ್ಳುತ್ತಿದ್ದನು.

*

ಇನ್ನೂ ಅಂಬರದ ಹಳೇ ಅರಮನೆಯ ನೆರೆಯೊಳಗ ಹಿರಣ್ಯಮಂದಿ ರದ ಸ್ಥಳವನ್ನು ತೋರಿಸುತ್ತಾರೆ. ಕಾಲಗತಿಯಿಂದ ಅಂಬರದ ರಾಜ್ಯವೂ ಅದರ ಅರಮನೆಯೂ ಹಿರಣ್ಯಮಂದಿರವೂ ಸುವರ್ಣಪ್ರತಿಮೆಯೂ ನಾಶ ವಾಗಿರುತ್ತವೆ. ಆದರೆ ಸುಶೀಲೆಯ ಕರುಣಾರಸ ಪೂರ್ಣ ಚರಿತ್ರವು ಮಾತ್ರ ಜಗತ್ತಿನಲ್ಲಿ ಅಕ್ಷಯವಾದ ಕೀರ್ತಿಯನ್ನು ಹೊಂದಿ ಮೆರೆಯುತ್ತದೆ.

ಸಮಾಪ್ತ.

# ಶ್ರೀ ವಾಗ್ದೇವಿ ಗ್ರಂಥಮಾಲೆ, ಧಾರವಾಡ.

೧. ಈ ನಮ್ಮ ಗ್ರಂಥಮಾಲೆಯ ಆಶ್ರಯದಾತರಾಗಲಪೇಕ್ಷಿಸುವವರು ಕನಿಷ್ಠ ಹತ್ತು ರುಪಾಯಿಗಳನ್ನು ಕೊಡಬೇಕು. ಅಂದರೆ ಅವರಿಗೆ ನಾವು ಈ ಮುಂಚಿತವಾಗಿ ಮುದ್ರಿಸಿದ ಯಾವತ್ತು ನೈತಿಕ—ಧಾರ್ಮಿಕ—ಪೌರಾಣಿಕ ಪುಸ್ತಕಗಳನ್ನೂ ನಾಟಕ-ಕಥೆ-ಕಾದಂಬರಿಗಳನ್ನೂ ಕಾಯದೆ ಪುಸ್ತಕಗಳನ್ನೂ ಒಂದೊಂದು ಪ್ರತಿ ಕಳಿಸುವದಲ್ಲದೆ, ನಾವು ಇನ್ನು ಮುಂದೆ ಮುದ್ರಿಸುವ ಪುಸ್ತಕಗಳ ಒಂದೊಂದು ಪ್ರತಿಯನ್ನು ಸಹ ಕಳುಹಿಸುತ್ತೇವೆ.

೨. ಈ ನಮ್ಮ ಗ್ರಂಥಮಾಲೆಯ ಚಂದಾದಾರರು ವರ್ಷಕ್ಕೆ ಅಂಚೆಯ ವೆಚ್ಚವನ್ನೊಡಗೊಂಡು ಒಂದು ರುಪಾಯಿ ಹನ್ನೆರಡು ಆಣೆ ಕೊಡಬೇಕು. ಅಂದರೆ ಅವರಿಗೆ ಒಂದು ವರ್ಷದಲ್ಲಿ ಮುದ್ರಿಸಿದ ಸಣ್ಣ ದೊಡ್ಡ ನಾಲ್ಕು ಪುಸ್ತಕಗಳನ್ನು ಕಳುಹಿಸುತ್ತೇವೆ. ಆದರೆ ಚಂದಾದಾರರು ನಮ್ಮ ಯಾವದೇ ಪುಸ್ತಕವನ್ನು ಬೇಡಿದರೂ ಅವರಿಗೆ ಅದನ್ನು ಮೂರುನಾಲ್ಕಾಂಶ ಬೆಲೆಗೆ ಕೊಡುತ್ತೇವೆ. ಅಂಚೆಯ ವೆಚ್ಚವನ್ನು ಬೇರೆ ಕೊಡಬೇಕಾಗುವದು.

೩. ನಮ್ಮ ಪುಸ್ತಕಗಳನ್ನು ಮಾರಾಟಕ್ಕಾಗಿ ತೆಗೆದುಕೊಳ್ಳುವ ಪುಸ್ತಕದ ವ್ಯಾಪಾರಸ್ಥರಿಗೂ ಶಾಲಾಮಾಸ್ತರರಿಗೂ ಯೋಗ್ಯವಾದ ಕಮಿಶನ್ನ ದೊರಕುವದು.

ತಾರೀಕು ೨೪ನೇ ಫೇಬ್ರುವರಿ ೧೯೨೮ ಇಸವಿ.

**ಗ. ಹು. ಹೊನ್ನಾಪುರಮಠ,**

ಸಂಪಾದಕ: "ಶ್ರೀ ವಾಗ್ದೇವಿ ಗ್ರಂಥಮಾಲೆ,"

**ಧಾರವಾ**